


# ವ್ಯಾವಹಾರಿಕ ಮಾನವಶಾಸ್ತ್ರ

ಡಾ. ಕೆ. ಜಿ. ಗುರುಮೂರ್ತಿ




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಜೂನ, ೧೯೬೨

ಉಪನ್ಯಾಸ ಗ್ರಂಥಮಾಲೆ

೯೮

# ವ್ಯಾವಹಾರಿಕ ಮಾನವಶಾಸ್ತ್ರ

ಡಾ. ಕೆ. ಜಿ. ಗುರುಮೂರ್ತಿ



ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೯೨

ಪ್ರಕಾಶಕರು :

ಸದಾನಂದ ಕನವಳ್ಳಿ
ನಿರ್ದೇಶಕರು
ಪ್ರಸಾರಾಂಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ಜೂನ, ೧೯೭೦ (೫,೦೦೦ ಪ್ರತಿಗಳು)
ದ್ವಿತೀಯ ಮುದ್ರಣ : ಡಿಶೆಂಬರ, ೧೯೭೨



ಬೆಲೆ : ರೂ. ೧-೦೦

ಮುದ್ರಕರು :

ಜಿ. ಬಿ. ಮನ್ವಾಚಾರ
ನಿರ್ದೇಶಕರು
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ-೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ

ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಇದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ತೊಂಬತ್ತೇಳು ಪುಸ್ತಿಕೆಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕುಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ,ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೨೫-೬-೧೯೭೦

**ಡಾ. ಎ. ಎಸ್. ಅಡಕೆ**
**ಕುಲಪತಿಗಳು**

# ಅರಿಕೆ

(ಮೊದಲ ಮುದ್ರಣ)

೧೯೬೬ ನೇ ಏಪ್ರಿಲ್ ೨೬ ರಂದು ಬೆಳಗಾಂವಿ ಜಿಲ್ಲೆಯ ಬೆಲ್ಲದಬಾಗೇವಾಡಿಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದವರು ಏರ್ಪಡಿಸಿದ್ದ ವ್ಯಾಸಂಗ ವಿಸ್ತರಣ ಭಾಷಣ ಮಾಲಿಕೆಯ ಅಂಗವಾಗಿ ಮಾಡಿದ ಭಾಷಣದ ಸಾರಾಂಶವೇ ಈ ಕಿರುಹೊತ್ತಿಗೆ. ಕೆಲವೆಡೆ ಹೆಚ್ಚಿನ ವಿಷಯಗಳನ್ನೂ ಸೇರಿಸಲಾಗಿದೆ.

ಈ ಪುಸ್ತಿಕೆಯಲ್ಲಿ ಪ್ರಸ್ತಾಪಿಸಿರುವ ವಿಷಯಗಳು ಹೊಸವಲ್ಲ. ಇವನ್ನು ನಾನು ಅನೇಕ ಪಠ್ಯಪುಸ್ತಕಗಳಿಂದಲೂ, ನಿತ್ಯಜೀವನದಿಂದಲೂ ಆರಿಸಿ ತೆಗೆದುಕೊಂಡಿದ್ದೇನೆ. ಸಾಮಾನ್ಯ ಓದುಗರಿಗೆ ಮಾನವಶಾಸ್ತ್ರ ಮತ್ತು ಅದರ ವ್ಯಾವಹಾರಿಕ ಉಪಯೋಗವನ್ನು ಪರಿಚಯ ಮಾಡಿಕೊಡುವುದೇ ಈ ಪುಸ್ತಿಕೆಯ ಉದ್ದೇಶವಾದ್ದರಿಂದ ಹೆಚ್ಚಿನ ಮತ್ತು ಆಳವಾದ ವಿಷಯಗಳನ್ನು ಇಲ್ಲಿ ಪ್ರಸ್ತಾಪಕ್ಕೆ ತೆಗೆದುಕೊಂಡಿಲ್ಲ.

ಈ ಪುಸ್ತಿಕೆಯ ಬರುವಿಕೆಗೆ ಅನೇಕರು ಒಂದಲ್ಲ ಒಂದು ರೀತಿಯಲ್ಲಿ ಸ್ಫೂರ್ತಿನೀಡಿದ್ದಾರೆ, ಸಹಾಯ ಮಾಡಿದ್ದಾರೆ. ನನಗೆ ಮಾನವಶಾಸ್ತ್ರದ ಮೊದಲ ಪಾಠ ಕಲಿಸಿದ ಡಾ॥ ಕೆ. ಈಶ್ವರನ್ ಅವರಿಗೆ ನಾನು ಚಿರಋಣಿ. ಎರಡನೆಯದಾಗಿ, ಪ್ರೊ.ಎಚ್.ಎಂ. ಮರುಳಸಿದ್ಧಯ್ಯ, ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರ ಅಧ್ಯಯನವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಇವರು ಈ

ಪುಸ್ತಿಕೆಯನ್ನು ಓದಿ ಅನೇಕ ಸಲಹೆಗಳನ್ನು ನೀಡಿದ್ದಾರೆ. ಇವರಿಗೆ ನಾನು ಅತ್ಯಂತ ಕೃತಜ್ಞ. ಕೊನೆಯದಾಗಿ, ಈ ಪುಸ್ತಿಕೆಯ ಪ್ರಕಟನೆಯಲ್ಲಿ ನೆರವಾದ ಪ್ರಕಟನ ಶಾಖೆಯ ನಿರ್ದೇಶಕರಾದ ಶ್ರೀ ಸಿ. ಎಸ್. ಕಣವಿ ಇವರಿಗೂ, ವಿಶ್ವವಿದ್ಯಾಲಯದ ಇತರ ಅಧಿಕಾರಿ ವರ್ಗದವರಿಗೂ ನಾನು ಆಭಾರಿಯಾಗಿದ್ದೇನೆ.

ಈ ಪುಸ್ತಿಕೆಯ ಮಾನವಶಾಸ್ತ್ರೀಯ ವಿಷಯದ ಬಗ್ಗೆ ಜನರಲ್ಲಿ ಆಸಕ್ತಿಯನ್ನು ಉಂಟುಮಾಡುತ್ತದೆ ಎಂದು ಆಶಿಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೨೫-೬-೧೯೭೦

**ಡಾ. ಕೆ. ಜಿ. ಗುರುಮೂರ್ತಿ**

# ವಿಷಯ ಸೂಚಿಕೆ

# ೧. ಮಾನವಶಾಸ್ತ್ರದ ಪರಿಚಯ

ಜ್ಞಾನವನ್ನು ವೈಜ್ಞಾನಿಕ ಮತ್ತು ಕಲಾವಿಭಾಗಗಳೆಂದು ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. ವಿಜ್ಞಾನ ವಿಭಾಗವನ್ನು ಭೌತಶಾಸ್ತ್ರಗಳು, ಜೀವಶಾಸ್ತ್ರಗಳು ಹಾಗೂ ಸಮಾಜ ವಿಜ್ಞಾನಗಳು ಎಂದು ಮತ್ತೆ ವಿಂಗಡಿಸಬಡುದು. ಭೌತಶಾಸ್ತ್ರಗಳು (Physical Sciences) ಭೌತ (Physical) ಮತ್ತು ರಾಸಾಯನಿಕ (Chemical) ವಸ್ತುಗಳನ್ನು ತಮ್ಮ ಅಭ್ಯಾಸದ ಮೂಲಗಳನ್ನಾಗಿ ಇಟ್ಟುಕೊಂಡರೆ, ಜೀವಶಾಸ್ತ್ರಗಳು Biological Sciences) ಸಕಲ ಜೀವಕೋಟಿಗಳನ್ನು ತಮ್ಮ ಅಭ್ಯಾಸದ ವಸ್ತುಗಳನ್ನಾಗಿಟ್ಟುಕೊಂಡಿವೆ. ಜೀವಿಗಳೆಂದರೆ ಚಲನೆಯುಳ್ಳ ಮೃಗ-ಪಕ್ಷಿಗಳೂ, ಕ್ರಿಮಿ-ಕೀಟಗಳೂ, ಅಚಲಿಗಳಾದ ಮರ ಗಿಡಗಳೂ ಆಗಿವೆ. ಆದರೆ ಇಂದಿನ ಪರಿಣತಿಯ (Specialization) ಯುಗದಲ್ಲಿ ಜೀವಿಗಳನ್ನು ಅಭ್ಯಾಸಮಾಡಲು ಪ್ರಾಣಿಶಾಸ್ತ್ರ (Zoology), ಸಸ್ಯಶಾಸ್ತ್ರ (Botany) ಮುಂತಾದ ಅನೇಕ ಶಾಸ್ತ್ರಗಳು ಮತ್ತು ಉಪಶಾಸ್ತ್ರಗಳು ಬೆಳೆದುಬಂದಿವೆ. ಇದೇ ರೀತಿ ಸಮಾಜವಿಜ್ಞಾನಗಳಾದ ಇತಿಹಾಸ (History )ಅರ್ಥಶಾಸ್ತ್ರ (Economics), ಸಮಾಜಶಾಸ್ತ್ರ (Sociology) ರಾಜ್ಯಶಾಸ್ತ್ರ (Political Science)ಮುಂತಾದುವು ಮಾನವನ ಸಮಾಜವನ್ನು ಅಭ್ಯಾಸದ ವಸ್ತುವನ್ನಾಗಿ ಸ್ವೀಕರಿಸಿವೆ. ಮೇಲಿನ ಎಲ್ಲ ಶಾಸ್ತ್ರಗಳೂ ಅವುಗಳ ಉಪಶಾಖೆಗಳೂ ಮಾನವನ ಹಿತಕ್ಕಾಗಿ

ದುಡಿಯುತ್ತಿವೆ. ಆದರೆ ಮಾನವನನ್ನೇ ಅಭ್ಯಾಸ ಮಾಡಲು ಬೇರೊಂದು ಶಾಸ್ತ್ರವಿದೆ. ಇತರ ಶಾಸ್ತ್ರಗಳು ಮಾನವನ ವಿವಿಧ ಚಟುವಟಿಕೆಗಳನ್ನು ಅಭ್ಯಾಸ ಮಾಡಿದರೆ ಮಾನವ ಶಾಸ್ತ್ರವು (Anthropology) ಮಾನವನನ್ನೇ ಅಭ್ಯಾಸ ಮಾಡುತ್ತದೆ.

ಸಕಲ ಜೀವಿಗಳನ್ನು ಒಟ್ಟಾಗಿ ತೆಗೆದುಕೊಂಡರೆ ಮಾನವನೂ ಒಂದು ಪ್ರಾಣಿ ಎಂದು ಪರಿಗಣಿಸಲ್ಪಡುತ್ತಾನೆ. ಮಾನವನು ಸಕಲ ಪ್ರಾಣಿಗಳಂತೆ ಜೀವಂತನಾಗಿರಲು ಆಹಾರವನ್ನು ಸೇವಿಸಬೇಕು, ವಿಶ್ರಾಂತಿಗಾಗಿ ನಿದ್ರಿಸಬೇಕು, ಶರೀರ ರಕ್ಷಣೆಗಾಗಿ ವಸತಿಗಳನ್ನು ಕಟ್ಟಿಕೊಳ್ಳಬೇಕು ಮತ್ತು ತನ್ನ ಪೀಳಿಗೆಯನ್ನು ಮುಂದುವರಿಸಲು ವಂಶಾಭಿವೃದ್ಧಿ ಮಾಡಬೇಕು. ಈ ಎಲ್ಲ ಲಕ್ಷಣಗಳು ಸಕಲ ಪ್ರಾಣಿಗಳಲ್ಲಿಯೂ ಕಂಡುಬರುತ್ತವಾದ್ದರಿಂದ ಮಾನವನನ್ನು ಒಂದು ಪ್ರಾಣಿ ಎಂದು ಪರಿಗಣಿಸಬಹುದು. ಆದರೆ ಮಾನವನು ಪ್ರಾಣಿಪ್ರಪಂಚದ ಈ ಎಲ್ಲಾ ಮೂಲ ಲಕ್ಷಣಗಳನ್ನು ಹೊಂದಿದ್ದರೂ ತನ್ನದೇ ಆದ ವಿಶೇಷ ಗುಣಗಳನ್ನು ಪಡೆದು, ಇತರ ಪ್ರಾಣಿಗಳಿಂದ ಬೇರೆಯೇ ಆಗಿರುತ್ತಾನೆ. ಇದಕ್ಕೆ ಅವನ ಬುದ್ಧಿಯ ಬೆಳವಣಿಗೆ, ಸುಧಾರಿಸಿದ ಅಂಗಾಂಗಗಳು, ಅವನೇ ನಿರ್ಮಿಸಿಕೊಂಡ ಸಂಸ್ಕೃತಿ (Culture) ಮತ್ತು ನಾಗರಿಕತೆಗಳೇ (Civilization) ಕಾರಣಗಳು. ಇವುಗಳಿಂದ ಮಾನವನು ತನ್ನ ಸುತ್ತಮುತ್ತಲಿನ ವಾತಾವರಣವನ್ನು, ವಸ್ತುಗಳನ್ನು ಮತ್ತು ಜೀವಿಗಳನ್ನು ತನ್ನ ಅಧೀನದಲ್ಲಿರಿಸಿಕೊಂಡು ಅವುಗಳ ಸೇವೆಯನ್ನು ಪಡೆಯಲು ಅವನಿಗೆ ಸಾಧ್ಯವಾಗಿದೆ. ಪ್ರಕೃತಿಯ (Nature) ಮೇಲಿನ ಮಾನವನ ಹಿಡಿತದ ಚರಿತ್ರೆ

ಸಾಧಾರಣವಾದದ್ದಲ್ಲ. ಇದಕ್ಕೆ ನಿರಂತರವಾಗಿ ಹಲವಾರು ಶತಮಾನಗಳ ಹೋರಾಟವನ್ನೇ ನಡೆಸಿಕೊಂಡು ಬಂದಿದ್ದಾನೆ. ಈ ಹೋರಾಟದ ಫಲವೇ ಸಂಸ್ಕೃತಿ ಮತ್ತು ನಾಗರಿಕತೆ.

ಮಾನವನು ಭೂಮಿಯ ಮೇಲೆ ಹೇಗೆ ಮತ್ತು ಯಾವಾಗ ಮೂಡಿಬಂದನೆಂಬುದನ್ನು ನಿರ್ಧರಿಸಲು ಇನ್ನೂ ಸೂಕ್ತವಾದ ಆಧಾರಗಳು ದೊರಕಿಲ್ಲ. ಆದರೂ ಉಪಲಬ್ಧವಿರುವ ಆಧಾರಗಳ ಮೇಲಿಂದ ಮಾನವನು ನಡೆದುಬಂದ ದಾರಿಯನ್ನು, ಅವನು ಪಟ್ಟ ಪಾಡುಗಳನ್ನು ಅನೇಕ ಮಾನವಶಾಸ್ತ್ರಜ್ಞರು (Anthropologists). ಪುರಾತನವಸ್ತು ಶಾಸ್ತ್ರಜ್ಞರು(Archaeologists) ರಮ್ಯವಾಗಿ ಚಿತ್ರಿಸಿದ್ದಾರೆ. ಉತ್ಕ್ರಾಂತಿಯ (Evolution) ಆಧಾರದ ಮೇಲೆ ಹೇಳುವುದಾದರೆ ಸಕಲ ಜೀವಿಗಳಂತೆ ಮಾನವನ ಹುಟ್ಟಿನ ಮೂಲವೂ ಏಕಕೋಶವುಳ್ಳ ಜೀವಾಣುಗಳಿಂದ (Unicellular Organizms) ಬಂದದ್ದು. ಮುಂದೆ ಕಾಲಾನುಕ್ರಮದಲ್ಲಿ ಭೂಮಿಯ ಮೇಲಿನ ವಾತಾವರಣದಲ್ಲಾದ ಬದಲಾವಣೆಗಳಿಂದ ಈ ಸರಳ ಜೀವಿಗಳಲ್ಲಿ ತೀವ್ರಗತಿಯ ಬದಲಾವಣೆಗಳಾಗಿ ಅವು ಮುಂದೆ ದೊಡ್ಡ ದೊಡ್ಡ, ಅತ್ಯಂತ ಜಟಿಲವಾದ ಮತ್ತು ಅನೇಕ ಕೋಶ–ದೇಹ ರಚನೆಯುಳ್ಳ (Multicellular) ಇಂದಿನ ಪ್ರಾಣಿಗಳಾಗಿ ಪರಿಣಮಿಸಿವೆ. ಇಂಥ ಪರಿವರ್ತನೆಯು ಕೇವಲ ನೂರು ಸಾವಿರ ವರ್ಷದ್ದಾಗಿರದೆ, ಕೋಟ್ಯಂತರ ವರ್ಷದ್ದಾಗಿದೆ.

ಹೀಗೆ ಪರಿವರ್ತನೆಗೊಂಡ ಜೀವಿಗಳನ್ನು ಅನೇಕ ಪ್ರಕಾರಗಳನ್ನಾಗಿ ಮಾಡಬಹುದು. ಕೆಲವು ಹಾರಾಡುವ ಪಕ್ಷಿಗಳಾದವು

(Avians),ಕೆಲವು ಈಜಾಡುವ ಜಲಜೀವಿಗಳಾದುವು,(Marine) ಇನ್ನೂ ಕೆಲವು ಭೂಮಿ ಮತ್ತು ನೀರು ಎರಡರಲ್ಲೂ ಜೀವಿಸಬಲ್ಲ ಮತ್ತು ಚಲಿಸಬಲ್ಲ ದ್ವಿಚರ (Amphibians) ಪ್ರಾಣಿಗಳಾದುವು. ಮುಂದೆ ವಾತಾವರಣದ ಬದಲಾವಣೆಯು ಒತ್ತಡದಿಂದ ಈ ಪ್ರಾಣಿಗಳು ತಮ್ಮ ದೇಹದ ರಚನೆಯಲ್ಲಿ ಅನೇಕ ಪರಿವರ್ತನೆ ಗಳನ್ನು ಹೊಂದಿ, ಇನ್ನೂ ಅನೇಕ ಉಪ ಗುಂಪುಗಳಾದುವು. ಇವುಗಳಲ್ಲಿ ಬೆನ್ನೆಲುಬುಳ್ಳ (Vertebrates) ಸಸ್ತನಿಗಳು (Mammals) ಒಂದು ಉಪಗುಂಪಿಗೆ ಸೇರುತ್ತವೆ. ಇವುಗಳ ಗುಂಪಿನಲ್ಲಿ ನರ ಹಾಗೂ ವಾನರ ಗುಂಪಿಗೆ ಸೇರಿದ ಗೊರಿಲ್ಲ. ಚಿಂಪಾಂಜಿ, ಗಿಬ್ಬನ್ ಮುಂತಾದುವು ಬರುತ್ತವೆ. ಇಲ್ಲಿಯೂ ಮಾನವ ಎಲ್ಲರಿಗಿಂತಲೂ ಉತ್ತಮನಿದ್ದಾನೆ. ಆದರೂ ಮಾನವನು ಇವರಲ್ಲಿ ಯಾವ ಕುಟುಂಬಕ್ಕೆ ಸೇರಿದವನೆಂಬುದು ಬಗೆಹರಿಯದ ಪ್ರಶ್ನೆಯಾಗಿದ್ದು, ಇಂದಿಗೂ ಅವನ ಮೂಲದ ಶೋಧನೆಯು ಕಾರ್ಯ ನಡೆದೇ ಇದೆ. ನೆಲದಲ್ಲಿ ಹೂತು ಹೋಗಿದ್ದ ಮೂಲ ಮಾನವರ ಅವಶೇಷಗಳು ಪ್ರಪಂಚದ ಅನೇಕ ಕಡೆ ದೊರೆತಿವೆ. ಈ ವಸ್ತುಗಳು ಅನೇಕ ಸಾವಿರ ವರ್ಷ ನೆಲದಲ್ಲಿ ಹೂತುಹೋಗಿ ದ್ದುದರಿಂದ ಮತ್ತು ವಾತಾವರಣ ಪರಿಣಾಮದಿಂದ ಸರಿಯಾದ ಸ್ಥಿತಿಯಲ್ಲಿಲ್ಲ. ಅಲ್ಲದೆ, ನೆಲದಲ್ಲಿ ಹುದುಗಿಕೊಂಡಿರುವ ಈ ಅವಶೇಷಗಳು ಇಂಥಲ್ಲಿಯೇ ಇವೆ ಎಂಬುದನ್ನು ಗೊತ್ತುಹಚ್ಚಲು ಬರುವುದಿಲ್ಲ. ಗಣಿ ಕೆಲಸ ನಡೆಸಿದ್ದಾಗ ಕಟ್ಟಡಗಳಿಗೆ, ಜಲಾಶಯ ಗಳಿಗೆ ನೆಲಪಾಯ ತೋಡುವಾಗ ಆಕಸ್ಮಿಕವಾಗಿ ಸಿಕ್ಕ ಅವಶೇಷ ಗಳನ್ನು ಕೂಡಿಸಿ ಮೂಲ ಮಾನವರ ಒಂದು ಪಟ್ಟಿಯನ್ನೇ ತಯಾರಿಸಲಾಗಿದೆ. ಆದರೆ ಸಸ್ತನಿಗಳ ಗುಂಪಿಗೆ ಸೇರಿದ ಮೂಲ ಮಾನವನಿಗೂ ಇತರ ಸಸ್ತನಿಗಳಿಗೂ ಇದ್ದಿರಬಹುದಾದ

"ಗೊಣಸು" ಇನ್ನೂ ದೊರಕಿಲ್ಲವಾದುದರಿಂದ ಉಪಲಬ್ಧವಾಗಿರುವ ಅವಶೇಷಗಳೂ ಈ ರಹಸ್ಯವನ್ನು ಪರಿಹರಿಸಲು ಶಕ್ಯವಾಗಿಲ್ಲ. ಅದೂ ಅಲ್ಲದೆ, ಮೂಲ ಮಾನವನಿಗೂ ಆಧುನಿಕ ಮಾನವನಿಗೂ ಅನೇಕ ಸಾಮ್ಯಗಳಿದ್ದರೂ ಅವರೊಳಗಿರುವ ವಿವಿಧತೆಗಳನ್ನು ಪರಿಹರಿಸಲೂ ಶಕ್ಯವಾಗಿಲ್ಲ. ಹೀಗೆ "ಕಾಣದ ಕೊಂಡಿ" (Missing Link) ಗಾಗಿ ಹುಡುಕಾಟ ನಡೆದಿದೆ. ಈ ಕಾಣದ ಕೊಂಡಿ ಕಂಡಾಗ ಈ ಎಲ್ಲಾ ರಹಸ್ಯಗಳಿಗೊಂದು ಸಮಂಜಸವಾದ ಉತ್ತರ ಸಿಕ್ಕೀತು.

ಮಾನವನು ಹೇಗೆಯೇ ಹುಟ್ಟಿರಲಿ, ಎಲ್ಲಿಯೇ ಇರಲಿ ಅವನು ತನ್ನ ವಿಶೇಷಗುಣಗಳಾದ ಹೆಚ್ಚಿನ ಬುದ್ಧಿ, ಸಂಸ್ಕೃತಿ, ಮುಂತಾದವುಗಳಿಂದ ಇತರ ಪ್ರಾಣಿಗಳಿಂದ ಭಿನ್ನವಾಗಿಯೇ ಬೆಳೆದು ಬಂದನು, ಅಂದರೆ ಅವನು ಸಂಸ್ಕೃತಿ, ಸಾಮಾಜಿಕ ಜೀವನ ಮುಂತಾದ ಅನೇಕ ವಿಷಯಗಳನ್ನು ಹೊಂದಿ ವಿಭಿನ್ನವಾದ ಜೀವನ ಕ್ರಮವನ್ನು ನಡೆಸುತ್ತಿದ್ದನು. ಇಂಥ ಮಾನವನನ್ನು ಐತಿಹಾಸಿಕವಾಗಿಯೂ, ವಾಸ್ತವಿಕವಾಗಿಯೂ ಅಭ್ಯಾಸ ಮಾಡುವಂತಹ ಆವಶ್ಯಕತೆ ಕಂಡುಬಂದುದರಿಂದ ಮಾನವ ಶಾಸ್ತ್ರವು ಹುಟ್ಟಿ ಬಂದಿತು. ಇಂಥ ಕಾಲದಲ್ಲಿದ್ದ ಅಥವಾ ಇರುವ ಇಂಥ ಸ್ಥಳದಲ್ಲಿದ್ದ ಅಥವಾ ಇರುವ ಮಾನವನನ್ನು ಮಾತ್ರವೇ ಅಭ್ಯಾಸ ಮಾಡುವಂಥ ಸೀಮಿತ ದೃಷ್ಟಿಯು ಈ ಶಾಸ್ತ್ರಕ್ಕೆ ಇಲ್ಲ. ಇದು ಮಾನವನನ್ನೇ ಅಭ್ಯಾಸದ ವಸ್ತುವನ್ನಾಗಿ ಸ್ವೀಕರಿಸಿರುವುದರಿಂದ ಮೂಲ ಮಾನವನನ್ನೂ, ಆದಿವಾಸಿಯನ್ನೂ, ಅಂತೆಯೇ ನವನಾಗರಿಕನನ್ನೂ ತನ್ನ ಅಭ್ಯಾಸದ ಕಕ್ಷೆಯಲ್ಲಿ ತೆಗೆದುಕೊಳ್ಳುತ್ತದೆ.

## ೨. ಮಾನವಶಾಸ್ತ್ರದ ಶಾಖೆಗಳು

ಮಾನವಶಾಸ್ತ್ರವನ್ನು ಶಾರೀರಿಕ ಮಾನವಶಾಸ್ತ್ರ (Physical Anthropology), ಸಾಂಸ್ಕೃತಿಕ ಮಾನವಶಾಸ್ತ್ರ (Cultural Anthropology), ಸಾಮಾಜಿಕ ಮಾನವಶಾಸ್ತ್ರ (Social Anthropology) ಎಂದು ಮೂರು ಮುಖ್ಯ ಭಾಗಗಳನ್ನಾಗಿ ವಿಂಗಡಿಸಬಹುದು, ಅಲ್ಲದೆ, ಆಳವಾದ ಅಭ್ಯಾಸದ ದೃಷ್ಟಿಯಿಂದ ಮಾನವಶಾಸ್ತ್ರವನ್ನು ಪ್ರಾಚೀನ ವಸ್ತುಶಾಸ್ತ್ರ (Archaeology) ಶಾರೀರಿಕ ಮಾನವಶಾಸ್ತ್ರ, ಸಾಮಾಜಿಕ ಮಾನವಶಾಸ್ತ್ರ, ಸಾಂಸ್ಕೃತಿಕ ಮಾನವಶಾಸ್ತ್ರ, ಮಾನವಕುಲಶಾಸ್ತ್ರ (Ethnology) ಮತ್ತು ಮಾನವಕುಲ ವಿವರಣಾಶಾಸ್ತ್ರ (Ethrography) ಎಂದು ಆರು ಭಾಗಗಳಾಗಿ ಮಾಡಬಹುದು. ಇತ್ತೀಚೆಗೆ ಮಾನಸಿಕ ಮಾನವಶಾಸ್ತ್ರ (Psychological Anthropology) ಮತ್ತು ವ್ಯಾವಹಾರಿಕ ಮಾನವಶಾಸ್ತ್ರ (Applied Anthropology) ಎಂಬೆರಡು ಶಾಖೆಗಳನ್ನು ಸೇರಿಸಲಾಗಿದೆ. ಒಂದೊಂದಾಗಿ ಈ ಎಲ್ಲಾ ಶಾಖೆಗಳನ್ನೂ ತೆಗೆದುಕೊಂಡು ಸ್ಥೂಲವಾಗಿ ಇವುಗಳ ಅಭ್ಯಾಸ ಕ್ಷೇತ್ರವನ್ನು ತಿಳಿಯೋಣ.

ಪ್ರಾಚೀನ ವಸ್ತುಶಾಸ್ತ್ರವು ಮೂಲಮಾನವನ ಅವಶೇಷ ಗಳನ್ನು ಅಭ್ಯಾಸ ಮಾಡುತ್ತದೆ. ಮಾನವನ ಅವಶೇಷಗಳೆಂದರೆ ಅವನ ಎಲುಬುಗಳು. ಅವನು ಉಪಯೋಗಿಸಿದ ಆಯುಧಗಳು

ಮತ್ತು ಇತರ ಸಲಕರಣೆಗಳು. ಇವುಗಳಿಗಾಗಿ ಭೂಮಿಯನ್ನು ಶಾಸ್ತ್ರೋಕ್ತವಾಗಿ ಕೆದಕಿ, ಅವುಗಳ ಇರವು, ಜೊತೆಗಿದ್ದ ವಸ್ತುಗಳು (Associated materials) ಮುಂತಾದವುಗಳನ್ನು ಸಂಗ್ರಹಿಸಿ ಮಾನವನ ಅಲಿಖಿತ ಇತಿಹಾಸವನ್ನು ಹೇಳಲು ಪುರಾತತ್ವ ಶಾಸ್ತ್ರಜ್ಞನು ಶ್ರಮಿಸುತ್ತಾನೆ. ಶಾರೀರಿಕ ಮಾನವಶಾಸ್ತ್ರಜ್ಞನು ಮುಖ್ಯವಾಗಿ ವಿವಿಧ ಮಾನವ ಕುಲಗಳಲ್ಲಿನ ಭೇದಗಳನ್ನು ಹುಡುಕಲು ಶ್ರಮಿಸುತ್ತಾನೆ. ಈ ಒಂದು ಕಾರ್ಯಕ್ಕೆ ಅವನು ವಿವಿಧ ಜನಾಂಗಗಳ (Races) ದೇಹರಚನೆ, ರಕ್ತಗುಣ, ಅಂಗಾಂಗಗಳ ಉದ್ದಳತೆ, ಚರ್ಮ, ಕೂದಲು ಮತ್ತು ಕಣ್ಣುಗಳ ಬಣ್ಣ ಮತ್ತು ಕೂದಲಿನ ರಚನೆ ಮುಂತಾದವುಗಳನ್ನು ಗಣನೆಗೆ ತೆಗೆದುಕೊಳ್ಳುತ್ತಾನೆ. ಸಾಮಾಜಿಕ ಮಾನವಶಾಸ್ತ್ರಜ್ಞನು ಮುಖ್ಯವಾಗಿ ಸಮಾಜದಲ್ಲಿನ ವಿವಿಧ ವ್ಯಕ್ತಿಗಳ ನಡುವಿನ ಸಂಬಂಧಗಳನ್ನು (Relations) ಸಮಾಜದಲ್ಲಿನ ಅನೇಕ ನಿಬಂಧನೆಗಳನ್ನು, ನಡವಳಿಕೆಗಳನ್ನು ಅಭ್ಯಾಸ ಮಾಡುತ್ತಾನೆ. ಈ ಸಂಬಂಧಗಳು ಒಂದೇ ಮನೆಯಲ್ಲಿನ ತಂದೆ ಮಕ್ಕಳ, ಅಣ್ಣ-ತಮ್ಮಂದಿರ, ಮಾವ-ಅಳಿಯಂದಿರ ಅಥವಾ ಬೀಗರ ಎರಡು ಗುಂಪಿನವರ ಸಂಬಂಧಗಳೂ ಆಗಿರಬಹುದು ಅಥವಾ ಅನ್ಯ ತೆರನ ಸಂಬಂಧಗಳೂ ಆಗಿರಬಹುದು. ಈ ಒಂದು ಸಂಬಂಧಗಳ ಬಗ್ಗೆ ಮಾಹಿತಿ ಇದ್ದರೆ ಸಾಮಾಜಿಕ ರಚನೆ (Social Structure). ಕಾರ್ಯಾಚರಣೆ. ಮತ್ತಿತರ ವಿಷಯಗಳ ಬಗ್ಗೆ ಹೆಚ್ಚಿನ ತಿಳುವಳಿಕೆ ಇರುತ್ತದೆ. ಸಾಂಸ್ಕೃತಿಕ ಮಾನವಶಾಸ್ತ್ರವು ಮುಖ್ಯವಾಗಿ ಸಮಾಜದಲ್ಲಿನ ನಿಬಂಧನೆಗಳು (Mores). ಪದ್ಧತಿಗಳು (Customs). ಧರ್ಮ (Religions). ನ್ಯಾಯ (Law). ಕ್ರಿಯಾ

ವಿಧಿಗಳು (Rituals), ಹಬ್ಬ-ಹರಿದಿನಗಳು ಮುಂತಾದವು ಗಳನ್ನು ಅಭ್ಯಾಸ ಮಾಡುತ್ತದೆ. ಇದರ ಇತ್ತೀಚೀನ ಮುಖ್ಯ ಕಾರ್ಯ ವೆಂದರೆ ಸಮಾಜದಲ್ಲಿನ ಮೌಲ್ಯಗಳ (Values), ಬಗ್ಗೆ ಅಭ್ಯಾಸ ಮಾಡುವುದು. ಯಾವೊಂದು ಗುಂಪಿನ ಸಂಸ್ಕೃತಿಯ ಬಗ್ಗೆ ಈ ತಿಳುವಳಿಕೆ ಇಲ್ಲದೆ ಇಂದಿನ ಬದಲಾವಣೆಗಳನ್ನು ತರುವುದು ಸಾಧ್ಯವಿಲ್ಲ. ಮಾನವಕುಲಶಾಸ್ತ್ರವು ಅಭ್ಯಾಸಕ್ಕೆ ಒಳಗಾದ ಗುಂಪಿನ ದೈನಂದಿನ ಜೀವನವನ್ನು ಶಬ್ದಗಳಲ್ಲಿ ಚಿತ್ರಿಸುತ್ತದೆ. ಇದರಿಂದ ಆ ಗುಂಪಿನ ಬಗ್ಗೆ ಹೆಚ್ಚಿನ ಸಂಗತಿಗಳನ್ನು. ನಿತ್ಯ ಜೀವನವನ್ನು ತಿಳಿಯಲು ಅನುಕೂಲವಾಗುತ್ತದೆ. ಮಾನವ ಮಾನವಕುಲವಿವರಣಾಶಾಸ್ತ್ರವು, ಮಾನವ ಕುಲಶಾಸ್ತ್ರವು ಒದಗಿ ಸಿರುವ ವಿವರಣೆಗಳನ್ನು ತೆಗೆದುಕೊಂಡು ಬೇರೆ ಬೇರೆ ಗುಂಪುಗಳ ನಡುವಿನ ಸಂಬಂಧ, ಅಂತರ. ವಿವಿಧತೆ ಮುಂತಾದವುಗಳನ್ನು ತುಲನಾತ್ಮಕ ದೃಷ್ಟಿಯಿಂದ ವಿವರಿಸುತ್ತದೆ. ಈ ಕೆಲಸವು ದೇಶದ ಅಥವಾ ಸಮಾಜದ ಜನಜೀವನದ, ಆಚಾರ-ವಿಚಾರಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನೊದಗಿಸುತ್ತದೆ. ಮಾನಸಿಕ ಮಾನವ ಶಾಸ್ತ್ರವು ವ್ಯಕ್ತಿಯ ವ್ಯಕ್ತಿತ್ವವನ್ನು ಆಯಾ ಸಮಾಜದ ಸಂಸ್ಕೃತಿ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ಅಭ್ಯಾಸಮಾಡಿ ವ್ಯಕ್ತಿಯ ಗುಣ, ನಡತೆ ಮುಂತಾದವುಗಳ ಬಗ್ಗೆ ತಿಳಿಸುತ್ತದೆ. ಇದು ವ್ಯಕ್ತಿತ್ವದ ಬೆಳವಣಿಗೆಯಲ್ಲಿಯೂ ಸಹಾಯಕವಾಗಬಲ್ಲದು.

ಈ ಮೇಲಿನ ಎಲ್ಲಾ ಶಾಖೆಗಳು ಗಳಿಸಿದ ಜ್ಞಾನವನ್ನು ಮಾನವನ ಶ್ರೇಯಸ್ಸಿಗಾಗಿ ಹೇಗೆ ಉಪಯೋಗಿಸಬೇಕೆಂದು ತಿಳಿಯಪಡಿಸುವ ಶಾಖೆಯೇ ವ್ಯಾವಹಾರಿಕ ಮಾನವಶಾಸ್ತ್ರ. ಪ್ರತಿ ನಿಮಿಷವೂ ಪ್ರಪಂಚದ ನಾನಾಕಡೆಗಳಲ್ಲಿ ಈ ಎಲ್ಲಾ ಶಾಖೆ

ಗಳಿಗೆ ಸೇರಿದ ಮಾನವ ಶಾಸ್ತ್ರಜ್ಞರು ಒಂದಲ್ಲ ಒಂದು ರೀತಿಯಿಂದ ಮಾನವ ಸಮಾಜ, ಸಂಸ್ಕೃತಿಗಳ ಬಗ್ಗೆ ಹೆಚ್ಚು ಹೆಚ್ಚಾಗಿ ತಿಳಿದುಕೊಳ್ಳುತ್ತಿದ್ದಾರೆ. ಈ ಒಂದು ಜ್ಞಾನವನ್ನು ಮಾನವನ ಕಲ್ಯಾಣಕ್ಕೆ ಉಪಯೋಗಿಸದಿದ್ದರೆ ಇದು ಬರಿ ಪುಸ್ತಕದಲ್ಲಿನ ಕಥೆಯಾಗುತ್ತದೆ. ಆದರೆ ಈ ಒಂದು ಜ್ಞಾನವನು ಯಾವ ರೀತಿಯಲ್ಲಿ ಯಾರು ಉಪಯೋಗಿಸಬೇಕೆಂಬುದು ಒಂದು ಮುಖ್ಯ ವಿಷಯ. ಅಲ್ಲದೆ ಮಾನವಶಾಸ್ತ್ರದ ಜ್ಞಾನವನ್ನು ಉಪಯೋಗಿಸಬೇಕೇ, ಬೇಡವೇ ಎಂಬುದನ್ನು ಇನ್ನೂ ನಿರ್ಧರಿಸದ ಕೆಲವು ದೇಶಗಳಿವೆ ಮತ್ತು ಕೆಲವು ದೇಶಗಳು ಕೇವಲ ಒಂದೆರಡು ಕ್ಷೇತ್ರಗಳಲ್ಲಿ ಮಾತ್ರ ಉಪಯೋಗಿಸಿ ಉಳಿದವುಗಳಲ್ಲಿ ಇದರ ಉಪಯೋಗ ಇಲ್ಲವೆಂದು ಪರಿಗಣಿಸಿವೆ. ಆದರೆ ಜ್ಞಾನ ಪ್ರಸಾರ ಹೆಚ್ಚಿದಂತೆಲ್ಲಾ ಈ ಶಾಸ್ತ್ರದ ಸಾರ್ವತ್ರಿಕ ಉಪಯೋಗದ ಔಚಿತ್ಯವನ್ನು ಎಲ್ಲ ದೇಶಗಳೂ ಕಂಡುಕೊಳ್ಳುವುದರಲ್ಲಿ ಸಂಶಯವಿಲ್ಲ.

ಮುಂದಿನ ಅಧ್ಯಾಯಗಳಲ್ಲಿ ವ್ಯಾವಹಾರಿಕ ಮಾನವ ಶಾಸ್ತ್ರವು ಹೇಗೆ ಮತ್ತು ಎಲ್ಲೆಲ್ಲಿ ಉಪಯೋಗಕ್ಕೆ ಯೋಗ್ಯವಾಗಿದೆ ಎಂಬುದನ್ನು ಸ್ಥೂಲವಾಗಿ ವಿವರಿಸಲಾಗುವುದು.

# ೩. ಆಡಳಿತದಲ್ಲಿ ಮಾನವಶಾಸ್ತ್ರ

ಕೇವಲ ಒಂದು ಶತಮಾನದ ಚರಿತ್ರೆಯುಳ್ಳ ಮಾನವಶಾಸ್ತ್ರವು ಇನ್ನೂ ತಾರುಣ್ಯದಲ್ಲಿದೆ. ಇತ್ತೀಚೆಗೆ ಬಂದ ವ್ಯಾವಹಾರಿಕ ಮಾನವಶಾಸ್ತ್ರವಂತೂ ಇನ್ನೂ ಬಾಲ್ಯಾವಸ್ಥೆಯಲ್ಲಿದೆ.

ಇತ್ತೀಚಿನವರೆಗೆ ಮಾನವಶಾಸ್ತ್ರದ ವ್ಯಾವಹಾರಿಕ ಉಪಯೋಗವು ಇರಲಿಲ್ಲ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಮತ್ತು ಯುದ್ಧದ ನಂತರ ಇದಕ್ಕೆ ಪ್ರಾಮುಖ್ಯತೆ ಬಂದಿತೆನ್ನಬಹುದು. ಇದಕ್ಕೂ ಮೊದಲು ಫ್ರೆಂಚರು, ಬ್ರಿಟಿಷರು ಮತ್ತು ಡಚ್ಚರು ತಮ್ಮ ವಸಾಹತುಗಳ (Colonies) ಆಳಿಕೆಯಲ್ಲಿ ಮಾನವಶಾಸ್ತ್ರದ ಜ್ಞಾನವನ್ನು ಉಪಯೋಗಿಸಿದ್ದರು. ಹೊಸ ನೆಲವನ್ನೇನೋ ಅವರು ತಮ್ಮ ಕತ್ತಿ. ಬಂದೂಕಿನ ಬಲದಿಂದ ಗೆದ್ದುಕೊಂಡರಾದರೂ, ಮುಂದೆ ಅವರ ಆಡಳಿತವು ಬಲದ ಆಧಾರದ ಮೇಲೆ ಸುಗಮವಾಗಿ ಸಾಗಲಿಲ್ಲ. ಇದನ್ನರಿತ ಅವರು ಬೇರೆ ಮಾರ್ಗ ಅನುಸರಿಸಬೇಕಾಯಿತು. ಈ ಮಾರ್ಗವೇ ಮಾನವಶಾಸ್ತ್ರದ ಮಾರ್ಗ.

ಆಯಾ ಪ್ರದೇಶದವರ (Natives) ಸಂಬಂಧಗಳು ಸಂಸ್ಕೃತಿ. ನಿರ್ಬಂಧನೆಗಳು. ಮೌಲ್ಯಗಳು ಮುಂತಾದವುಗಳ ಬಗ್ಗೆ ಕೂಲಂಕಷವಾದ ಅಭ್ಯಾಸಮಾಡಿ ಆಳವಾದ ಮಾಹಿತಿ ಪಡೆದು ಆ ಮಾಹಿತಿಯ ಬೆಳಕಿನಲ್ಲಿ ನಡೆದರೆ ಆಡಳಿತವು ಸುಗಮವಾಗುತ್ತದೆ. ಉದಾಹರಣೆಗೆ. ಬ್ರಿಟಿಷರು ಭಾರತ ಭೂಮಿಯ

ರಾಜ್ಯಾಡಳಿತೆಯನ್ನು ಕೈವಶ ಮಾಡಿಕೊಂಡರು. ಆದರೆ ಅವ ರಿಂದ ಭಾರತೀಯರನ್ನು "ಗೆಲ್ಲಲು" ಆಗಲಿಲ್ಲ. ಈ ಕಾರಣ ದಿಂದ ಕೆಲ ಕಾಲದ ನಂತರ ಅವರು ದೇಶವನ್ನು ನಾಗರಿಕರ ಆಡಳಿತಕ್ಕೆ ಒಪ್ಪಿಸಬೇಕಾಯಿತು. ಆಗ ಅವರು ಹಿಂದಿನ ರಾಜ ನವಾಬರನ್ನು ತಮ್ಮ ಪ್ರತಿನಿಧಿಗಳನ್ನಾಗಿ ಇಟ್ಟುಕೊಂಡು, ಅದರ ಮೂಲಕ ಒಂದು ದೃಷ್ಟಿಯಲ್ಲಿ ಪರೋಕ್ಷವಾಗಿ (indirect), ರಾಜ್ಯಭಾರ ಮಾಡಬೇಕಾಯಿತು. ಅವರು ಈ ರಾಜರು, ಧರ್ಮ ಗುರುಗಳು ಮತ್ತು ಪಂಡಿತರೊಡನೆ ಚರ್ಚಿಸದೆ ಯಾವೊಂದು ಕಾನೂನನ್ನೂ ಜಾರಿಗೆ ತರಲಿಲ್ಲ. ಅಲ್ಲದೆ, ಜನರಿಗೆ ಹೇಯ ವೆನಿಸಬಹುದಾದ ಯಾವೊಂದು ಕಾನೂನನ್ನೂ ತಾವೇ ನೇರ ವಾಗಿ ಒತ್ತಾಯದಿಂದ ಹೇರಲಿಲ್ಲ. ಉದಾಹರಣೆಗೆ, ಬಾಲ ವಿವಾಹ, ವಿಧವಾ ವಿವಾಹ, ಸಹಗಮನ, ಗೋಸಂರಕ್ಷಣೆ ಮುಂತಾದವುಗಳ ಬಗೆಗೆ ಯಾವೊಂದು ಕಾನೂನನ್ನೂ ತರಲು ಮೊದಮೊದಲು ಹಿಂಜರಿದರು. ಒಂದು ವೇಳೆ ಅವರು ಹಾಗೆ ಮಾಡಿದ್ದರೆ ಕಾನೂನುಗಳನ್ನು ಕಾಪಾಡಲು ಮತ್ತೆ ಕತ್ತಿ ಬಂದೂಕು ಗಳನ್ನು ಉಪಯೋಗಿಸಬೇಕಾಗುತ್ತಿತ್ತು. ಯಾಕೆಂದರೆ ಇದು ಜನತೆಯಲ್ಲಿ ಗೊಂದಲವನ್ನುಂಟುಮಾಡಿ,ವಸಾಹತುಗಳ ಆಳ್ವಿಕೆಯ ಮೂಲ ಉದ್ದೇಶಗಳಾದ ಲಾಭದಾಯಕ ವ್ಯಾಪಾರ, ಗಣಿಕೆಲಸ, ಕಚ್ಚಾವಸ್ತುಗಳ ಸಾಗಾಟ, ತೋಟಗಾರಿಕೆ ಮುಂತಾದವುಗಳು ಸುಸೂತ್ರವಾಗಿ ನಡೆಯದೆ, ನಷ್ಟವಾಗುತ್ತಿತ್ತು. ಆದ್ದರಿಂದ ಅವರು ಯಾವೊಂದು ಕಾನೂನು ತರುವುದಕ್ಕೆಮುಂಚೆ ಅಲ್ಲಿನವರ ಬಗ್ಗೆ ಹೆಚ್ಚಿನ ಮಾಹಿತಿ ಹೊಂದಿದ ಧರ್ಮಗುರುಗಳು. ಪಂಡಿತರು ಮೊದಲಾದ ಸ್ಥಳೀಯ ಸಲಹೆಗಾರರ (native advisors) ಸಲಹೆಗಳನ್ನು ಪಡೆಯುತ್ತಿದ್ದರು. ಆದುದರಿಂದ

ಪ್ರತಿ ಸಮಾಜದಲ್ಲಿಯೂ ತಮ್ಮ ಸಮಾಜ ಸಂಸ್ಕೃತಿಯನ್ನು ಆತ್ಮೀಕವಾಗಿ ಅರಿತಿರುವ ನಿಪುಣತರ ಜ್ಞಾನವನ್ನು ಉಪಯೋಗಿಸಿಕೊಂಡರೆ ಆಡಳಿತೆಯು ಸುಗಮವಾಗುತ್ತದೆ.

ಅಲ್ಲದೆ, ಆಡಳಿತ ನಡೆಸಲು ಬಂದ ಅಧಿಕಾರಿಗಳು ತಾವು ಕಾರ್ಯನಿರ್ವಹಿಸುವ ಸಮಾಜದ ಬಗ್ಗೆ ಹೆಚ್ಚಿನ ತಿಳುವಳಿಕೆ ಇರಿಸಿಕೊಂಡಿರಬೇಕು. ಇದಕ್ಕೆಂದು ಬ್ರಿಟಿಷರು ತಮ್ಮ ಅಧಿಕಾರೀ ವರ್ಗಕ್ಕೆ ಆಯಾಯ ಜನರ ಜೀವನದ ಬಗ್ಗೆ ಸರಿಯಾದ ಮಾಹಿತಿ ನೀಡಿ, ಅವರೊಂದಿಗೆ ಹೇಗೆ ನಡೆದುಕೊಳ್ಳಬೇಕೆಂದು ತಿಳಿಯಪಡಿಸುವಂಥ ತರಬೇತಿಯನ್ನು ನೀಡುತ್ತಿದ್ದರು. ಈ ಒಂದು ಕಾರಣದಿಂದಲೇ ಬ್ರಿಟಿಶರ ವಸಾಹತುಗಳು ಇತರರ ವಸಾಹತುಗಳಿಗಿಂತಲೂ ಶಾಂತರೀತಿಯಲ್ಲಿದ್ದು ಅವರ ಆಳ್ವಿಕೆಯು ಲಾಭದಾಯಕವಾಗಿದ್ದಿತು. ಅಲ್ಲದೆ, ಇಲ್ಲಿ ಅನೇಕ ಸಾಮಾಜಿಕ ಸುಧಾರಣಾ ಕಾರ್ಯಗಳಾದ ವಿದ್ಯಾಭ್ಯಾಸ , ಸಮಾಜಕಾರ್ಯ ಮುಂತಾದವುಗಳನ್ನು ಮಾಡಲು ಅವರಿಗೆ ಸಾಧ್ಯವಾಯಿತು.

ಇಂದು ವಸಾಹತುಗಳಿಲ್ಲ, ನಿಜ. ತಮ್ಮದೇ ಆದ ಸ್ವರಾಜ್ಯಕ್ಕೆ ಹೋರಾಡಿ ಸ್ವತಂತ್ರವಾದ ದೇಶಗಳು ಕೆಲವಿದ್ದರೆ. ಪ್ರಪಂಚದ ರಾಜಕೀಯ ವಾತಾವರಣದ ಒತ್ತಡಕ್ಕೆ ಸ್ವಾತಂತ್ರ್ಯ ಪಡೆದ ದೇಶಗಳು ಅನೇಕವಿವೆ. ಹಿಂದೆ ರಾಜರು ಅಥವಾ ಮುಖ್ಯಸ್ಥರಿದ್ದ ಸ್ಥಾನದಲ್ಲಿ ಬ್ರಿಟಿಶ್ ಆಳರಸರು ಬಂದಿದ್ದರು. ಇವರು ಇರುವಷ್ಟು ದಿನ ಆಡಳಿತವು ಅಷ್ಟಾಗಿ ತೊಂದರೆ-ಗಳಿಲ್ಲದೆಯೆ ಸುಸೂತ್ರವಾಗಿ ನಡೆಯಿತು. ಆದರೆ ಮುಂದೆ ತಮ್ಮದೇ, ಅಂದರೆ ಪ್ರಜಾ ಸರಕಾರ ಹೊಂದಬೇಕೆಂಬ ಹಂಬಲದಲ್ಲಿ ಹೋರಾಡಿ ಸ್ವಾತಂತ್ರ್ಯ ಪಡೆದ ಕೆಲವು ದೇಶಗಳು

ಪ್ರಜಾರಾಜ್ಯಕ್ಕೆ ಬೇಕಾದಂಥ ಶಕ್ತಿ ಸಂಪಾದನೆಯು ತರಬೇತಿ ಪಡೆಯುದೆ, ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರಿರುವ, ಆರ್ಥಿಕ ಮತ್ತು ಸಾಮಾಜಿಕ ವಿಷಯುಗಳಲ್ಲಿ ತೀರಾ ಹಿಂದುಳಿದ ದೇಶಗಳು ತಮ್ಮ ಕಾಲಮೇಲೆ ತಾವು ನಿಲ್ಲದಾದವು. ಇನ್ನೂ ಕೆಲವು ಸಂಪ್ರದಾಯಸ್ಥ (Traditional) ಸಮಾಜಗಳು ಚಕ್ಕಡಿಯುುಗ ದಿಂದ ನೇರವಾಗಿ ವಿಮಾನ ಯುಗಕ್ಕೆ ಜಿಗಿಯಲು ಪ್ರಯತ್ನ ಮಾಡಿದವು. ಅಲ್ಲದೆ, ತಮ್ಮ ಜನಜೀವನದ ಎಲ್ಲ ರಂಗಗಳಲ್ಲೂ ಆಧುನಿಕತೆಯನ್ನು ಅವರು ತಂದರು, ತರುತ್ತಿದ್ದಾರೆ. ಇದರಿಂದಾಗಿ ಶಿಕ್ಷಣ, ಆಡಳಿತೆ, ಯಾಂತ್ರಿಕತೆ ಮುಂತಾದವುಗಳಿಗೆಲ್ಲಾ ಹೊಸ ಉಡುಗೆಯನ್ನು ತೊಡಿಸಿದರು. ಅಭಿವೃದ್ಧಿಯ ತುತ್ತತುದಿಯನ್ನು ಮುಟ್ಟಿದ್ದ ಪಾಶ್ಚಾತ್ಯ ರಾಷ್ಟ್ರಗಳನ್ನು ಅನುಕರಿಸುವ ತಮ್ಮ ಈ ಪಂದ್ಯದಲ್ಲಿ ತಮಗೆ ಆ ಒಂದು ಶಕ್ತಿ ಇದೆಯೇ? ಜನತೆ ಈ ಒಂದು ಭಯಂಕರ ಪರಿವರ್ತನೆಗೆ ಸಿದ್ಧರಾಗಿದ್ದಾರೆಯೇ? ಕಾಲಕ್ರಮೇಣ ಮುಂದೆ ಬರಬಹುದಾದ ತೊಂದರೆಗಳನ್ನು ಎದುರಿಸಲು ಅವರು ಸಿದ್ಧರಿರುವರೇ? ಎಂಬುದನ್ನು ಕೂಡ ಅರಿಯಲು ಅವರಿಗೆ ಸಹನೆ ಇರಲಿಲ್ಲ. ಹೀಗಾಗಿ ತೀವ್ರವಾದ ಬದಲಾವಣೆಗಳು ಸಂಪ್ರದಾಯಸ್ಥ ಸಮಾಜದಲ್ಲಿನ ಜನರಲ್ಲಿ ಅನೇಕ ತೊಂದರೆಗಳನ್ನು ತಂದವು.

ಈ ರೀತಿಯಲ್ಲಿ ಎಲ್ಲ ದೇಶಗಳೂ ಈಗ ತೀವ್ರಗತಿಯಲ್ಲಿ ಬದಲಾಗತೊಡಗಿವೆ. ಹಿಂದೆಯೂ ಅವು ಬದಲಾಗುತ್ತಿದ್ದವು; ಆದರೆ ಅದು ತಮ್ಮದೇ ಆದ ಗತಿಯಲ್ಲಿ. ಆ ಬದಲಾವಣೆಯು ನೋವಿನ ಅಥವಾ ಕಹಿಯಾದ ಪ್ರಸಂಗಗಳನ್ನು ತರುತ್ತಿರಲಿಲ್ಲ. ಆದರೆ ಇಂದು ಈ ಬದಲಾವಣೆಯು ಗಾಳಿಯು ಆಂತರಿಕ (Internal) ವಾದುದಾಗಿರದೆ ಅನೇಕ ವೇಳೆ ಹೊರಗಿನಿಂದ

ಬೀಸಿದ್ದಾಗಿದೆ. ಇಂದಿನ ಪ್ರಪಂಚದ ರಾಜಕೀಯ ಆಟದ ಸೆಳೆತದಲ್ಲಿ ಶ್ರೀಮಂತ ದೇಶಗಳು ತಮ್ಮ ಪ್ರಭಾವವನ್ನು ಮುಂದುವರಿಯುತ್ತಿರುವ ದೇಶಗಳ ಮೇಲೆ ಬೀರಲು ಹಣ, ಜನ ಮತ್ತು ಜ್ಞಾನದ ಸಹಾಯ ನೀಡಲು ಮುಂದೆ ಬಂದಿವೆ. ಅನೇಕ ವೇಳೆ ಇದು ಸ್ಪರ್ಧೆಗೆ ಎಡೆಕೊಟ್ಟು ಸಹಾಯವನ್ನು ತೆಗೆದುಕೊಳ್ಳುವ ದೇಶವು ಯಾವೊಂದು ನಿರ್ದಿಷ್ಟ ನಿರ್ಣಯಕ್ಕೆ ಬರಲಾರದಾಗಿದ್ದರೂ ಸಹಾಯ ನೀಡುವ ದೇಶದ ಬುದ್ಧಿವಾದದ ಮೇರೆಗೆ ಹೊಸ ಹೊಸ ಪದ್ಧತಿಗಳನ್ನು, ಸಲಕರಣೆಗಳನ್ನು, ವಿದ್ಯೆಯನ್ನು, ಆಡಳಿತ ಪದ್ಧತಿಯನ್ನು ತೆಗೆದುಕೊಳ್ಳುತ್ತೇವೆ. ಇದರಿಂದಾಗಿಯೂ ಸಮಾಜದಲ್ಲಿ ಒಂದೇ ಬಾರಿಗೆ ಅನೇಕ ಬದಲಾವಣೆಗಳಾದುವು. ತಿಳುವಳಿಕೆ, ತರಬೇತಿ ಮತ್ತು ಎಲ್ಲದಕ್ಕಿಂತಲೂ ಮಿಗಿಲಾಗಿ ಬದಲಾಗಲು ಮನಸ್ಸಿಲ್ಲದ ಜನತೆಯು ಮಾನಸಿಕ ತೊಂದರೆಗೆ ಒಳಗಾಯಿತು. ವ್ಯಕ್ತಿ ವ್ಯಕ್ತಿಗಳ ನಡುವಿನ ಸಂಬಂಧಗಳು ಕೆಟ್ಟವು. ಹಳೆಯ ಸಂಪ್ರದಾಯಗಳು ತಮ್ಮ ಮೌಲ್ಯ ಕಳೆದುಕೊಂಡವು. ಯಾಕೆಂದರೆ ಈ ಸಮಾಜಗಳಲ್ಲಿ ಯಾವೊಂದು ಬದಲಾವಣೆಯನ್ನು ಯೋಜಿಸಿ (planned change) ತಂದಿರಲಿಲ್ಲ. ಯೋಜನೆಗೆ ಬೇಕಾದ ಮಾಹಿತಿ, ಅಂದರೆ –ಜನತೆಯ ಬಗ್ಗೆ, ಅವರ ಮನೋಭಾವನೆಗಳ ಬಗ್ಗೆ– ಅವರ ಬೇಕು ಬೇಡಗಳ ಬಗ್ಗೆ, ಅಲ್ಲಿನ ಆಡಳಿತಗಾರರ ಬಗ್ಗೆ, ಇರಲಿಲ್ಲ. ಇಂಥ ಕೊರತೆಯನ್ನು ಮಾನವಶಾಸ್ತ್ರದ ನೆರವಿನಿಂದ ತುಂಬಿಕೊಳ್ಳಲು ಸಾಧ್ಯವಿದೆ.

ವಸಾಹತುಗಳು ಕುಸಿದ ನಂತರ ಉದಯವಾದ ಸ್ವತಂತ್ರ ರಾಷ್ಟ್ರಗಳು ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು.

ಪ್ರಜಾಪ್ರಭುತ್ವ, ಐಕ್ಯತೆ, (Integration) ಮುಂತಾದವುಗಳಲ್ಲಿ ಜನತೆಗೆ ಸರಿಯಾದ ಪರಿಜ್ಞಾನವಿಲ್ಲದ್ದೂ ಒಂದು ತೊಡಕಾಯಿತು. ಅಲ್ಲದೆ, ಈ ರಾಷ್ಟ್ರಗಳ ಜನತೆಯಲ್ಲಿ ಹಿಂದಿನ ಆಡಳಿತಗಾರರು, ಸರಕಾರದ ಬಗ್ಗೆ ಮೂಡಿಸಿದ್ದ ಮನೋಭಾವನೆಗಳೇ ಮುಂದುವರೆದವು. ಅಲ್ಲದೆ ಅನೇಕ ಆದಿವಾಸಿ ಅಥವಾ ಬುಡಕಟ್ಟುಗಳು (Tribals) ದೇಶದ ಹಿತದಲ್ಲಿ ಯಾವ ಪಾತ್ರವನ್ನೂ ಇದುವರೆಗೆ ವಹಿಸಿರಲಿಲ್ಲ. ಸರಕಾರವೂ ಇವರು "ಉಪಯೋಗವಿಲ್ಲದ ಜನರು" ಎನ್ನುವ ಅಭಿಪ್ರಾಯವನ್ನು ಹೊಂದಿತ್ತು. ಆದರೆ ಈ ದೇಶಗಳು ಸ್ವತಂತ್ರವಾದ ನಂತರ ತಮ್ಮ ರಾಷ್ಟ್ರದ ಸಮಗ್ರತೆ ಮತ್ತು ಆರ್ಥಿಕ ಮುನ್ನಡೆಯ ದೃಷ್ಟಿಯಿಂದ ಇವರ ಬಗ್ಗೆ ಗಮನ ತೆಗೆದುಕೊಂಡವು. ಈ ವಿಷಯದಲ್ಲಿ ಭಾರತವನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಭಾರತ ದೇಶವು ಸ್ವತಂತ್ರವಾದ ಕೂಡಲೇ ಜನತೆಯನ್ನು ಒಟ್ಟುಗೂಡಿಸುವ ಕಾರ್ಯದಲ್ಲಿ ದೇಶವನ್ನು ಕೇವಲ ಕೆಲವೇ ರಾಜ್ಯಗಳನ್ನಾಗಿ ವಿಂಗಡಿಸಿತು. ಹಿಂದಿದ್ದ ಚಿಕ್ಕಪುಟ್ಟ ರಾಜ್ಯ–ನವಾಬರು ತಮ್ಮ ಹಕ್ಕುಗಳನ್ನು ಕಳೆದುಕೊಂಡರು. ಅಲ್ಲದೆ. ರಾಷ್ಟ್ರದ ಹಿತದೃಷ್ಟಿಯಲ್ಲಿ ಮುಖ್ಯವಲ್ಲದವುಗಳೆಂದು ಕಡೆಗಣಿಸಿದ್ದ ಕೆಲವು ಪ್ರದೇಶಗಳೂ ಪ್ರಾಮುಖ್ಯತೆಗೆ ಬಂದವು. ಇವುಗಳಲ್ಲಿ ನೇಫಾ ವಿಭಾಗವು ಮುಖ್ಯವಾದದ್ದು. ಆಂಗ್ಲ ಅರಸರು ಕಡೆಗಣಿಸಿದಂತೆ ನಾವು ಇಂದು ಈ ಪ್ರದೇಶವನ್ನು ಕಡೆಗಣಿಸುವಂತಿರಲಿಲ್ಲ. ಈ ಪ್ರದೇಶವು ಭಾರತದ ಸಂರಕ್ಷಣೆಯ ದೃಷ್ಟಿಯಿಂದಲೂ. ದೇಶದ ಆರ್ಥಿಕ ದೃಷ್ಟಿಯಿಂದಲೂ ಬಹು ಮುಖ್ಯವಾದ ಸ್ಥಾನವನ್ನು ಪಡೆದಿದೆ. ನೇಫಾದ ಆಚೆಗಿನ ಚೈನಾ ಗಡಿಯಲ್ಲಿನ ಸೈನಿಕ ನೆಲೆ

ಗಳಿಗೆ ಸರಬರಾಜು ಮತ್ತಿತರ ಕಾರ್ಯಗಳು ಸುಲಭವಾಗಲು ಅಲ್ಲಿ ಜನತೆಯಲ್ಲಿ ಶಾಂತಿ ಮತ್ತು ಸಹಕಾರ ಮನೋಭಾವನೆ ಇರಬೇಕು. ಇಲ್ಲದಿದ್ದರೆ ತೊಂದರೆಯಾಗುತ್ತದೆ. ಅಲ್ಲದೆ ಈ ಪ್ರದೇಶದಲ್ಲಿನ ನೈಸರ್ಗಿಕ ಸಂಪತ್ತುಗಳಾದ ಅರಣ್ಯ ಮತ್ತು ಖನಿಜಗಳನ್ನು ನಾವು ತರಬೇಕಾದರೂ ನಮಗೆ ಅಲ್ಲಿಯ ಜನತೆ ಯಿಂದ ಸಹಕಾರ ಬೇಕಾಗುತ್ತದೆ. ಈ ಎಲ್ಲಾ ಕಾರಣಗಳಿಂದ ಈ ಜನಗಳನ್ನು ಸರಿಯಾಗಿ ಅರ್ಥಮಾಡಿಕೊಂಡು, ಅವರ ಅಭಿ-ವೃದ್ಧಿಯಲ್ಲಿ ಸಹಕರಿಸಿದರೆ, ಇದು ಅವರಲ್ಲಿ ರಾಷ್ಟ್ರೀಯ ಮನೋಭಾವವನ್ನು ತಂದು ರಾಷ್ಟ್ರದ ಅಭಿವೃದ್ಧಿಗೆ ಅನುಕೂಲ ವಾಗುತ್ತದೆ. ಈ ಕಾರಣಗಳಿಂದ ನೇಫಾ ಪ್ರದೇಶದಲ್ಲಿ ಅಭಿ-ವೃದ್ಧಿಕಾರ್ಯಗಳಿಗೆ ಮಹತ್ವದ ಸ್ಥಾನವನ್ನು ನೀಡಲಾಯಿತು.

ಮಾನವಶಾಸ್ತ್ರದ ಜ್ಞಾನವನ್ನು ನಿರಾಶ್ರಿತರ (Refugees) ಮತ್ತು ಪ್ರಕೃತಿಯ ವಿಕೋಪಕ್ಕೆ ಸಿಕ್ಕು ನಿರ್ಗತಿಕರಾದ ಜನರಿಗೆ ಪುನರ್ವಸತಿಯನ್ನು ನೀಡುವಲ್ಲಿ ಉಪಯೋಗಿಸಬಹುದು. ಉದಾಹರಣೆಗೆ, ಪಾಕಿಸ್ತಾನ ಮತ್ತು ಟಿಬೆಟ್‌ಗಳಿಂದ ಬಂದ ನಿರಾ ಶ್ರಿತರನ್ನು ತೆಗೆದುಕೊಳ್ಳಬಹುದು. ಈ ಜನರು ತಮ್ಮ ಮೂಲ ನಿವಾಸ ಸ್ಥಳದ ನೆಲ–ಹವೆಗಳಿಗೆ ಅನುಗುಣವಾದ ತಮ್ಮದೇ ಆದ ಸಂಸ್ಕೃತಿಯನ್ನು ಸೃಷ್ಟಿಸಿಕೊಂಡು, ಅಲ್ಲಿ ಲಭ್ಯವಿದ್ದ ಅನುಕೂಲತೆ ಗಳಿಂದಲೇ ಸುಖವಾಗಿದ್ದರು. ಇಂತಹ ಜನರು ತಮ್ಮ ನೆಲ ಮತ್ತು ಜನರನ್ನು ಬಿಟ್ಟು ಬೇರೆ ಕಡೆಗೆ ಬರುವುದೆಂದರೆ ಒಂದು ದೊಡ್ಡ ಸಮಸ್ಯೆ. ಅಲ್ಲದೆ ಅವರನ್ನು ಅವರ ಮೂಲ ನಿವಾಸಸ್ಥಳ ದಿಂದ ಬೇರೆಯೇ ಆದ ಕಡೆಗಳಲ್ಲಿ ಪುನರ್ವಸತಿಗೊಳಿಸುವುದೆಂದರೆ ಅವರು ಹೊಸ ಜಾಗ ಮತ್ತು ಹೊಸ ಹವಾಗುಣಕ್ಕೆ, ಹೊಸ

ಸಮೂನೆಯ ವೃತ್ತಿ ಸಾಮಾಜಿಕ ಸಂಬಂಧಗಳಿಗೆ ಹೊಂದಿ-ಕೊಂಡು, ಹೊಸ ಜೀವನವನ್ನೇ ಪ್ರಾರಂಭಿಸಬೇಕಾಗುತ್ತದೆ. ಇಂತಹ ಜನರು ಹೊಸ ಜೀವನಕ್ಕೆ ಹೊಂದಿಕೊಳ್ಳುವ ಪರಿ-ಸ್ಥಿತಿಯು ನರಕಯಾತನೆಗಿಂತಲೂ ಕಠೋರ ಆಗುತ್ತದೆ. ಆದರೆ ಅವರ ಪೂರ್ವಸಂಸ್ಕೃತಿ, ಸಾಮಾಜಿಕ ಸಂಬಂಧಗಳು, ವೃತ್ತಿ-ನಂಬಿಕೆ, ಮುತ್ತಿತರ ವಿಷಯಗಳ ಬಗ್ಗೆ ವಿಶೇಷ ಮಾಹಿತಿ ಇದ್ದರೆ ಅವರಿಗೆ ತಮ್ಮ ಹೊಸ ಸ್ಥಳದಲ್ಲಿ ಆದಷ್ಟು ಮಟ್ಟಿಗೆ ಹಳೆಯ ನಮೂನೆಯ ಅನುಕೂಲತೆಗಳನ್ನೇ ಒದಗಿಸಿಕೊಟ್ಟು, ಅವರ ಮಾನಸಿಕ ನೋವನ್ನು ಸ್ವಲ್ಪ ಮಟ್ಟಿಗಾದರೂ ಶಮನಮಾಡು ಬಹುದು. ಈ ಒಂದು ಪರಿಜ್ಞಾನ ಇಲ್ಲದೆ ನಾವು ಹಣದ ಹೊಳೆಯನ್ನೇ ಹರಿಸಿದ ನಂತರವೂ ಆ ಜನರು ಸುಖ–ಶಾಂತಿ ಗಳಿಲ್ಲದೆ ಜೀವಿಸಿದರೆ ಎಲ್ಲರ ಶ್ರಮಗಳೂ ವ್ಯರ್ಥವಾಗುತ್ತವೆ. ಅನೇಕ ವೇಳೆ ಈ ಜನರಿಗೆ ಸರಿಯಾದ ವಾತಾವರಣ ಕಲ್ಪಿಸಿಕೊಡ ದಿದ್ದರೆ ಅನೇಕ ಸಾಮಾಜಿಕ ಸಮಸ್ಯೆಗಳೂ ಹುಟ್ಟಬಹುದು. ಈ ಎಲ್ಲಾ ಕಾರಣಗಳಿಂದ ಅವರ ಸಮಸ್ಯೆಗಳನ್ನು ಮಾನವಶಾಸ್ತ್ರದ ದೃಷ್ಟಿಯಿಂದ ನೋಡಿ, ಅರ್ಥಮಾಡಿಕೊಂಡು, ಅವನ್ನು ಮಾನವಶಾಸ್ತ್ರದ ದಾರಿಯಲ್ಲಿಯೇ ನಿವಾರಿಸಿದರೆ ಎಲ್ಲರ ಶ್ರಮ ಗಳೂ ಸಾರ್ಥಕವಾಗುತ್ತವೆ. ಇಂಥ ಪ್ರಸಂಗಗಳಲ್ಲಿ ಮಾತ್ರವೇ ಅಲ್ಲದೆ, ಭೂಕಂಪ, ನೆರೆಹಾವಳಿ ಮುಂತಾದ ಪ್ರಕೃತಿ ವಿಕೋಪಕ್ಕೆ ಈಡಾಗಿ ತಮ್ಮ ಮೂಲ ನಿವಾಸಗಳಿಂದ ಬುಡಮೇಲಾಗಿ ಹೋದ ಜನರಿಗೆ ಮರುವಸತಿ ನಿರ್ಮಿಸುವಲ್ಲಿಯೂ ಮಾನವಶಾಸ್ತ್ರದ ಜ್ಞಾನವನ್ನು ಉಪಯೋಗಿಸಬಹುದು.

# ೪. ವಿದ್ಯಾಕ್ಷೇತ್ರದಲ್ಲಿ ಮಾನವಶಾಸ್ತ್ರ

**(Anthropology In Education)**

ಇಂದು ವಿದ್ಯೆ ಎನ್ನುವ ಪದವು ತನ್ನ ನಿಜವಾದ ಅರ್ಥವನ್ನು ಕಳೆದುಕೊಂಡಿದೆ ಎನ್ನಬಹುದು. ಇದು ಇಂದು ನೌಕರಿ ಗಳಿಸುವ ಒಂದು ಸಾಧನವಾಗಿದ್ದು. ಹಿಂದೆ ಇದ್ದ ಒಂದು ಗೌರವ ಮತ್ತು ಸ್ಥಾನವನ್ನು ಕಳೆದುಕೊಂಡಿದೆ. ಇಂದಿನ ವಿದ್ಯೆಯು ಕೇವಲ ನೌಕರಿಗಾಗಿದ್ದು ಜೀವನದ ಇತರ ಕ್ಷೇತ್ರಗಳಲ್ಲಿ ಉಪಯೋಗವಿಲ್ಲದ್ದಾಗಿ ಪರಿಣಮಿಸಿರುವುದರಿಂದ ಪದವೀಧರರಲ್ಲಿ ಅನೇಕರು ಅಸುಖಿಗಳಾಗಿದ್ದಾರೆ. ಒಂದು ಸಮಾಜದಲ್ಲಿ ಜನಿಸಿ, ಅದೇ ಸಮಾಜದ ನಿಬಂಧನೆಗಳಿಗೊಳಗಾದ ವಿದ್ಯಾಮಂದಿರಗಳಲ್ಲಿ ವಿದ್ಯೆ ಗಳಿಸಿಯೂ ಅಸುಖಿಗಳಾಗಿರುವಂಥ ಪರಿಸ್ಥಿತಿ ಈ ಹಿಂದೆ ಇರಲಿಲ್ಲ. ಇಂದಿಗೂ ಅನೇಕ ಆದಿವಾಸಿಗಳ ಸಮಾಜದಲ್ಲಿ ಇಂಥ ಒಂದು ಸಮಸ್ಯೆ ಇಲ್ಲ. ಇದಕ್ಕೆ ಕಾರಣ ಆ ಸಮಾಜಗಳಲ್ಲಿ ಅವರು ತಮ್ಮದೇ ಆದ ರೀತಿಯಲ್ಲಿ ತಮ್ಮ ತರುಣರಿಗೆ ವಿದ್ಯೆ ನೀಡುತ್ತಾರೆ. ಅವರು ಕೊಡುವ ವಿದ್ಯೆಯು ತಮ್ಮ ಸಮಾಜದ ತರುಣರನ್ನು ಮುಂದೆ ಸಮಾಜದ ಉತ್ತಮ ಸದಸ್ಯರನ್ನಾಗಿ ಮಾಡುವ ಸಾಮರ್ಥ್ಯವನ್ನು ಪಡೆದಿದೆ. ಉದಾಹರಣೆಗೆ, ಒಂದು ಹಳ್ಳಿಯಲ್ಲಿ ಅಥವಾ ಆದಿವಾಸಿಗಳ ಸಮಾಜದಲ್ಲಿ ಕಲಿತವನೆಂದೆನಿಸಿಕೊಂಡವನು ಕಲಿತ ವಿಷಯಗಳೆಂದರೆ ದಿನನಿತ್ಯ ಜೀವನದಲ್ಲಿ

ಉಪಯೋಗಕ್ಕೆ ಬೀಳುವ ಕಸಬುಗಳಾದ ಹಗ್ಗ ಮಾಡುವುದು. ನೇಯುವುದು, ತಮಗೆ ಬೇಕಾದ ಇತರ ವಸ್ತುಗಳನ್ನು ಮಾಡುವುದು, ಗುಂಪಿನ ಜಾನಪದ ಗೀತೆಗಳು, ಕುಣಿತ, ಕಥೆಗಳು ಗಿಡಮೂಲಿಕೆಗಳ ಉಪಯೋಗದ ಬಗ್ಗೆ ಜ್ಞಾನ, ರೋಗಸ್ಥ ಜನ ಮತ್ತು ಜಾನುವಾರಗಳ ಚಿಕಿತ್ಸೆ ಮುಂತಾದವುಗಳಿದ್ದವು. ಇವುಗಳಲ್ಲಿ ಪರಿಣತನಾದವನು ಆ ಗುಂಪಿಗೆ ಬೇಕಾದವನಾಗಿ, ಉತ್ತಮ ನಾಗರಿಕನಾಗಿ, ಎಲ್ಲರ ಕಣ್ಮಣಿಯಾಗಿರುತ್ತಿದ್ದನು. ಅಲ್ಲದೆ ಅವನು ಕಲಿತ ವಿದ್ಯೆಯು ಜೀವನದ ಎಲ್ಲ ರಂಗಗಳಲ್ಲಿಯೂ ಉಪಯೋಗಕ್ಕೆ ಬೀಳುತ್ತಿತ್ತು ಆದ್ದರಿಂದ ಅವನ ಜೀವನವೂ ಸುಖಮಯವಾಗಿರುತ್ತಿತ್ತು.

ಆದರೆ ಇಂದಿನ ಆಧುನಿಕ ವಿದ್ಯಾಪದ್ಧತಿಯು ಇಂತಹ ವಿದ್ಯೆಗೆ ತದ್ವಿರುದ್ಧವಾಗಿದೆ. "ಪುಸ್ತಕ ವಿದ್ಯೆ"ಗಾಗಿ ವರ್ಷಗಳನ್ನೇ ಶಾಲೆಗಳಲ್ಲಿ ಕಳೆಯಬೇಕು. ಕಷ್ಟಪಟ್ಟು ಕಲಿತರೂ ಜೀವನೋಪಾಯಕ್ಕೆ ತಾನು ಮನೆಯಲ್ಲಿ ಅನೌಪಚಾರಿಕವಾಗಿ ಕಲಿತ ಕುಶಲ ಕಲೆಗಳಂತೆ ಶೀಘ್ರ ಉಪಯೋಗಕ್ಕೆ ಇದು ಬರುವುದಿಲ್ಲ. ಇದರಿಂದ ಪ್ರತಿಫಲ ಪಡೆಯಲು ೧೦–೧೨ ವರ್ಷಗಳ ಕಾಲ, ತನ್ನವರನ್ನು ತನ್ನ ಊರನ್ನು ಬಿಟ್ಟು, ಪರಸ್ಥಳಗಳಲ್ಲಿ ಅದರಲ್ಲೂ ಅನುಚಿತ ಸ್ಥಳಗಳಲ್ಲಿದ್ದು ಕಲಿಯಬೇಕು, ಕಲಿತನಂತರ ಇದರ ಉಪಯೋಗ ಬರೀ ನೌಕರಿ ಸಿಕ್ಕರೆ ಮಾತ್ರ. ಇಂದು ಕಲಿತ ವಿದ್ಯಾವಂತನಿಂದ ಅವನು ಸಮಾಜಕ್ಕೆ ಯಾವೊಂದು ತೀವ್ರ ಸಹಾಯವಿಲ್ಲ. ಇವನು ತನ್ನ ಗುಂಪಿನಿಂದ ದೂರವಿದ್ದುದರಿಂದ ಇವನಿಗೆ ತನ್ನ ಗುಂಪಿನ ಜಾನಪದ ಗೀತೆಗಳು, ನೃತ್ಯ, ಆಟ–ಪಾಟಗಳು ತಿಳಿಯುವು

ಮತ್ತು ಯಾವ ಕಸುಬುಗಳೂ ಬರವು. ಇವರು ಪಟ್ಟಣಗಳಲ್ಲಿದ್ದವರಾದ್ದರಿಂದ ಆಧುನಿಕತೆಯ ಗಾಳಿಯಲ್ಲಿ ಬೆಳೆದು, ತಮ್ಮ ಜನರನ್ನೇ ಹಿಂದುಳಿದವರು, ಅನಾಗರಿಕರೆಂದು ಕಡೆಗಣಿಸುತ್ತಾರೆ. ಅವರೊಡನೆ ಬೆರೆಯುವುದೂ ತಮ್ಮ ಗೌರವಕ್ಕೆ ಕುಂದು ಎಂಬುದು ಇವರ ಭಾವನೆಯಾಗುತ್ತದೆ. ಈ ಕಾರಣದಿಂದ ಅವರು ತಮ್ಮ ಹಳ್ಳಿಗಳಿಗೆ ಅಥವಾ ಆದಿವಾಸಿ ಸಮಾಜಗಳಿಗೆ ಹಿಂತಿರುಗುವುದಿಲ್ಲ. ಹಿಂತಿರುಗಿದರೂ ಅಲ್ಲಿ ತಮ್ಮದೇ ಆದ ವಿದ್ಯಾವಂತರ ಗುಂಪು ಕಟ್ಟಿಕೊಂಡು ಬೇರೆಯವರಿಂದ ದೂರವಾಗಿರುತ್ತಾರೆ. ಇಂಥ ವಿದ್ಯೆಯು ವಿದ್ಯಾವಂತರನ್ನು ಆ ಸಮಾಜದ ಘಾತಕರನ್ನಾಗಿ ಮಾರ್ಪಡಿಸುತ್ತದೆ. ನೌಕರಿ ಸಿಗದವರು ತಮ್ಮ ಮನೆತನದ ಕಸಬು ಕಲಿಯದೆ ತಮ್ಮ ಮನೆಯವರಿಗೆ ಮತ್ತು ಸಮಾಜಕ್ಕೆ ಹೊರೆಯಾಗುತ್ತಾರೆ. ಕೆಲವೊಮ್ಮೆ ಜೀವನದಲ್ಲಿ ಜುಗುಪ್ಸೆ ತಾಳುವುದೂ ಉಂಟು. ಆದ್ದರಿಂದ ಇಂತಹ ಹಳ್ಳಿಯ ಅಥವಾ ಆದಿವಾಸಿ ತರುಣರು ವಿದ್ಯಾಭ್ಯಾಸಕ್ಕೆ ಹೋಗುವುದಕ್ಕೆ ಮುಂಚೆ ಇವರ ಪೂರ್ವಾಪರಗಳನ್ನು ತಿಳಿದು, ಇವರಿಗೆ ಬೇಕಾದ ವಿದ್ಯೆ ಯಾವುದು, ಇದರ ಪರಿಣಾಮವೇನು ಎಂಬುದನ್ನು ಅರಿತು ಸೂಕ್ತ ವಿದ್ಯೆಯನ್ನು ನೀಡತಕ್ಕಂಥ ಏರ್ಪಾಟಾಗಬೇಕು. ಇಲ್ಲದಿದ್ದರೆ ಸಮಾಜದಲ್ಲಿ ಜೀವನ ಕಠಿಯಾಗುತ್ತದೆ. ಸರಕಾರ ಅಥವಾ ಯಾವುದೇ ಸಂಘವು 'ಅನುಪಯೋಗಿ' ವಿದ್ಯೆಗೆ ಉತ್ತೇಜನ ನೀಡುವಂಥ ಕಾರ್ಯಕ್ರಮವನ್ನು ಯೋಜಿಸಿದಾಗ ಜನತೆಯು ಆ ಯೋಜನೆಯ ಬಗ್ಗೆ ಉಪೇಕ್ಷಾದೃಷ್ಟಿಯನ್ನು ತಳೆಯಬಹುದು.

ಆದುದರಿಂದ, ಯಾವೊಂದು ಸಮಾಜವೇ ಆಗಲಿ ತನ್ನ ಜನತೆಯ ಶಿಕ್ಷಣದ ಬಗ್ಗೆ ಸರಿಯಾದ ಉದ್ದೇಶ, ಯೋಜನೆಗಳನ್ನು ಇಟ್ಟುಕೊಳ್ಳಬೇಕು. ಇಲ್ಲದಿದ್ದರೆ ಸರಕಾರದ ಮತ್ತು ಜನತೆಯ ಹಣ ಮತ್ತು ಶ್ರಮ ವ್ಯರ್ಥವಾಗುತ್ತದೆ. ಉದಾ-ಹರಣೆಗೆ, ಭಾರತ ದೇಶವನ್ನು ತೆಗೆದುಕೊಳ್ಳೋಣ, ಎಲ್ಲರಿಗೂ ಸರಿಯಾಗಿ ಉಂಡು ಉಟ್ಟುಕೊಳ್ಳುವಂಥ ಸ್ಥಿತಿಯಿಲ್ಲ. ಇದರಲ್ಲಿ ಕೆಲವರಾದರೂ ಸರಿಯಾದ ಸ್ಥಿತಿಯಲ್ಲಿದ್ದಾರೆ. ಆದರೆ ಅವರೂ ಈ ಒಂದು ಅವಕಾಶವನ್ನು ಸರಿಯಾದ ರೀತಿಯಲ್ಲಿ ಉಪ-ಯೋಗಿಸುತ್ತಿಲ್ಲ. ಇದಕ್ಕೆ ಅನೇಕ ಕಾರಣಗಳಿವೆ. ಉದಾಹರಣೆಗೆ ನಮ್ಮ ಗೃಹವಿಜ್ಞಾನದ ವಿದ್ಯಾಭ್ಯಾಸವನ್ನೇ ತೆಗೆದುಕೊಳ್ಳೋಣ. ಇಂದು ನಮ್ಮ ದೇಶದಲ್ಲಿ ಅನೇಕ ಗೃಹವಿಜ್ಞಾನ ಶಾಲಾ–ಕಾಲೇಜುಗಳಿವೆ: ಅನೇಕರು ಇವುಗಳಲ್ಲಿ ತರಬೇತಿ ಪಡೆದ ಪದವೀಧರರಾಗಿದ್ದಾರೆ. ಅಂದಮಾತ್ರಕ್ಕೆ ನಮ್ಮ ಜನತೆಯಲ್ಲಿ ಊಟ–ವಸತಿಗಳ ಬಗ್ಗೆ ಸರಿಯಾದ ಜ್ಞಾನವಿದೆ ಎಂದು ಅರ್ಥವಲ್ಲ. ಇಂದು ಈ ಗೃಹವಿಜ್ಞಾನ ವಿಷಯವನ್ನು ತೆಗೆದುಕೊಂಡು ಅಭ್ಯಾಸ ಮಾಡುವ ಜನರು ದೊಡ್ಡ ಅಧಿಕಾರಿಗಳ ಮತ್ತು ಶ್ರೀಮಂತರ ಮನೆಗಳಿಂದ ಬಂದವರು. ಈ ಸ್ಥಿತಿವಂತರ ಮನೆಯ ಹೆಣ್ಣು–ಮಕ್ಕಳಿಗೆ 'ಡಿಗ್ರಿ' ಬೇಕು. ಅನೇಕ ವೇಳೆ ಅವರಿಗೆ ಸರಿಯಾದ ವರ ಸಿಗುವವರೆಗೆ ಕಾಲ ಕಳೆಯಲು ಒಂದು 'ನೆವ' ಬೇಕು. ಅದರಲ್ಲೂ ಗೃಹವಿಜ್ಞಾನವನ್ನು ಓದುತ್ತಿದ್ದಾಳೆಂದರೇ ಒಂದು ಗೌರವ. ಇಂಥವರ ಗೃಹವಿಜ್ಞಾನದ ಜ್ಞಾನ ಮುಂದೆ ಅವರ ಮನೆಯಲ್ಲಿಯೋ ಆಗಲೀ ಸಮಾಜಕ್ಕೆ ಆಗಲಿ ಉಪ

ಯೋಗಕ್ಕೆ ಬರುವುದಿಲ್ಲ. ಕಾರಣ ಇವರು ಮುಂದೆ ನೌಕರಿ ಮಾಡುವುದಿಲ್ಲ. ಎರಡನೆಯದಾಗಿ ಇವರು ಹುಟ್ಟಿದ ಮನೆತನ ಗಳಂತೆ ಇವರು ಹೋದ ಮನೆತನಗಳೂ ಸ್ಥಿತಿವಂತರ ಮನೆ ಗಳಾಗಿರುತ್ತವಾದ್ದರಿಂದ ಇವರಲ್ಲಿ ಅಡುಗೆ ಮಾಡುವುದರಿಂದ ಹಿಡಿದು ಮನೆತನಕ್ಕೆ ಬೇಕಾಗುವ ಪದಾರ್ಥಗಳನ್ನು ತರುವುದಕ್ಕೂ ಕೆಲಸದವರಿರುತ್ತಾರೆ. ಇವರು ತಮ್ಮ ಸಂಘ, ಕೂಟ, ಮುಂತಾ ದವುಗಳ ಕಾರ್ಯದಲ್ಲಿ ಮುಳುಗಿಹೋಗುವುದರಿಂದ ಅವರಿಗೆ ತಾವು ಪಡೆದ ಗೃಹವಿಜ್ಞಾನದ ಜ್ಞಾನದ ಉಪಯೋಗ ಬೀಳು ವುದಿಲ್ಲ. ಇವೆಲ್ಲ ಕೈ--ಮೈ ಮುಸಿಯಾಗುವ ಕೆಲಸವಾದ್ದರಿಂದ ಇವರಲ್ಲಿ ಕೆಲವರು ಗೃಹಾಲಂಕಾರದಲ್ಲಿ ತೊಡಗುತ್ತಾರೆ. ಇಂಥವರ ಮನೆಯಲ್ಲಿ ಬಾಗಿಲಿಗೆ ಕಟ್ಟಿರುವ ಗಂಟೆಗಳ ಸರಗಳನ್ನು ದೀಪಸ್ತಂಭಗಳನ್ನು. ಮೂಲೆ ಮೂಲೆಗಳನ್ನು ಅಲಂಕರಿಸಿರುವ ವಿವಿಧ ಗಿಡ--ಬಳ್ಳಿಗಳ ಟೊಂಗೆಗಳನ್ನು ಮಾತ್ರ ನಾವು ಕಾಣ ಬಹುದು.

ಗೃಹವಿಜ್ಞಾನವನ್ನು ಕಲಿತವರ ಕೆಲಸ ಇದಾದರೆ, ಗೃಹ-ವಿಜ್ಞಾನವನ್ನು ಅಭ್ಯಾಸದ ವಿಷಯವನ್ನಾಗಿ ತಂದ ನಮ್ಮ ಸರಕಾರವೂ ಇವರ ಬಗ್ಗೆ ಸರಿಯಾದ ಧೋರಣೆಯನ್ನು ಹೊಂದಿಲ್ಲ ಎಂದು ಅರ್ಥವಾಗುತ್ತದೆ. ಇಂಥ ಸ್ಥಿತಿಯನ್ನು ನಮ್ಮ ಸರ ಕಾರ ನಡೆಸುತ್ತಿರುವ ಅನೇಕ ಸಂಸ್ಥೆಗಳಾದ ಆಸ್ಪತ್ರೆಗಳಲ್ಲಿ. ಬಂದೀ ಖಾನೆಗಳಲ್ಲಿ, ವಸತಿಗೃಹಗಳಲ್ಲಿ ನಾವು ಕಾಣಬಹುದು. ಇಲ್ಲಿ ನೂರಾರು ಜನರಿಗೆ ಒಂದೇ ಕಡೆ ಅಡುಗೆ ಮಾಡುತ್ತಾರೆ. ಇಲ್ಲಿ ಮಾಡಿದ ಅಡುಗೆಯು ಆರೋಗ್ಯದ ದೃಷ್ಟಿಯಿಂದ ಸಮಂತೋಕ

ವಾದದ್ದೇ (balanced) ಎಂಬುದು ಯಾರಿಗೂ ತಿಳಿಯದು. ಕಾಂಟ್ರಾಕ್ಟರನು ತಂದು "ಸುರುವಿದ" ಊಟವನ್ನು ನಮ್ಮ ರೋಗಿಗಳು, ಬಂಧಿತರು ಮತ್ತು ವಿದ್ಯಾರ್ಥಿಗಳು ತಿನ್ನುತ್ತಾರೆ. ಇದರಿಂದ ಅವರಿಗೆ ಆಗುವ ಹಾನಿಯೇನು ಎಂಬುದನ್ನು ಗೃಹ ವಿಜ್ಞಾನದಲ್ಲಿ, ಆಹಾರದ ಪೌಷ್ಟಿಕತ್ವದಲ್ಲಿ (nutrition) ಪರಿಣತಿಯನ್ನು ಪಡೆದವರೇ ನಿರ್ಣಯಿಸಬೇಕು. ಆದರೆ ನಾವು ಇವರ ಸಹಾಯವನ್ನು ತೆಗೆದುಕೊಳ್ಳುತ್ತಿಲ್ಲ. ಈ ಕಾರಣದಿಂದ ಗೃಹವಿಜ್ಞಾನದಲ್ಲಿ ಪದವಿ ಪಡೆದವರು ತಮ್ಮ ಜ್ಞಾನವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಲು ಅವಕಾಶವಿಲ್ಲದೆ ಬೇರೆ ಕಡೆಗೆ ನೌಕರಿ ಮಾಡುತ್ತಿದ್ದಾರೆ, ಇಲ್ಲವೆ ನಿರುದ್ಯೋಗಿಗಳಾಗಿದ್ದಾರೆ. ಗೃಹವಿಜ್ಞಾನವನ್ನು ಅಧ್ಯಯನಕ್ಕೆ ತಂದ ಸರಕಾರ ಅವರಲ್ಲಿ ಪರಿಣತರಾದವರನ್ನು ಸರಿಯಾದ ರೀತಿಯಲ್ಲಿ ಸಮಾಜದ ಒಳಿತಿಗಾಗಿ ಉಪಯೋಗಿಸಿಕೊಳ್ಳಬೇಕು. ಇವರನ್ನು ನಮ್ಮ ಸಾರ್ವಜನಿಕ ಊಟ—ವಸತಿ ಸ್ಥಳಗಳಲ್ಲಿ, ಆಸ್ಪತ್ರೆ ಮುಂತಾದ ಕಡೆಗಳಲ್ಲಿ ಆಹಾರದ ಬಗ್ಗೆ ವಿಶೇಷ ಗಮನ ಕೊಡುವಂತೆ ಮತ್ತು ಜನತೆಯಲ್ಲಿ ಈ ಬಗ್ಗೆ ಹೆಚ್ಚಿನ ತಿಳುವಳಿಕೆ ಬರುವಂತೆ ಮಾಡಲು ಉಪಯೋಗಿಸಬೇಕು.

ಇಂದಿನ ನಮ್ಮ ಯೋಜನೆಯು ಯುಗದ ಎಲ್ಲಾ ಯೋಜನೆಗಳೂ ಫಲಕಾರಿಯಾಗುವಂತೆ ಮಾಡಲು ಮೊದಲು ಜನರಲ್ಲಿ ಯೋಜನೆಗಳ ಬಗ್ಗೆ ಸರಿಯಾದ ಜ್ಞಾನ ಬರುವಂತೆ ಮಾಡುವುದೂ ವಿದ್ಯಾಸಂಸ್ಥೆಗಳ ಕರ್ತವ್ಯ. ಕಾರಣ, ಕೆಲವು ಸಂಪ್ರದಾಯಸ್ಥ ಸಮಾಜಗಳಲ್ಲಿ ಅವರ ಸರಕಾರ ತರಬೇಕೆಂದಿರುವ ಅನೇಕ

ಬದಲಾವಣೆಗಳಿಗೆ ಅನುಕೂಲವಾಗಿ ಜನತೆಯೂ ಬದಲಾಗುವುದು ಮುಖ್ಯ. ಬದಲಾಗಬೇಕೆಂದರೆ ತಾವು ಕಲಿತಿರುವುದರಲ್ಲಿ ಉಪಯೋಗವಿಲ್ಲದ್ದನ್ನು ಮರೆತು ಬದಲಾಗುವುದನ್ನು ಕಲಿಯಬೇಕು. ಉದಾಹರಣೆಗೆ, ನಾವು ನಮ್ಮ ಸಾರ್ವಜನಿಕ ಸ್ಥಳಗಳಾದ ರಸ್ತೆ. ಬಸ್ ನಿಲ್ದಾಣ, ರೇಲ್ವೆ ನಿಲ್ದಾಣ ಮುಂತಾದವುಗಳಲ್ಲಿ ಸಾರ್ವಜನಿಕರಿಗೆ ತೆರೆದಿರುವ ಹೊಸ ನಮೂನೆಯ ಮೂತ್ರಿಗಳನ್ನು ತೆಗೆದುಕೊಳ್ಳೋಣ. ಅನೇಕರಿಗೆ ಇವುಗಳನ್ನು ಉಪಯೋಗಿಸುವ ವಿಧಾನ ತಿಳಿಯದು. ಇನ್ನೂ ಕೆಲವರಿಗೆ ಇಲ್ಲಿ ಹೋಗುವುದೆಂದರೆ 'ಪ್ರಾಣಸಂಕಟ'. ತಾವು ಹಳ್ಳಿ-ಹೊಲಗಳಲ್ಲಿ ಕುಳಿತಂತೆ ಎಲ್ಲೆಡೆಗಳಲ್ಲಿಯೂ ಕುಳಿತುಬಿಡುತ್ತಾರೆ. ನಾವು ಎಷ್ಟೇ ಪ್ರಯತ್ನಪಟ್ಟರೂ ಈ ಜನರಿಗೆ ಈ ಒಂದು ಹೊಸ ನಮೂನೆಯ ಜೀವನಕ್ಕೆ ಹೊಂದಿಕೊಳ್ಳುವುದು ಕಷ್ಟ. ಕಾರಣ ಅವರು ತಮ್ಮದೇ ಆದ ಒಂದು ಜೀವನಕ್ರಮಕ್ಕೆ ಹೊಂದಿಕೊಂಡಿರುತ್ತಾನೆ. ಈ ಜೀವನಕ್ರಮವನ್ನು ಬಿಟ್ಟು ಹೊಸ ಪದ್ಧತಿಗಳಿಗೆ ಬರುವುದು ತೊಂದರೆಯಾಗುತ್ತದೆ. ಇದಕ್ಕೆ ಕಾರಣ ಅವರು ಹುಟ್ಟಿದಾಗಿನಿಂದಲೂ ತಮ್ಮ ಸಂಸ್ಕೃತಿಯ ಮಡಿಲಲ್ಲಿ ಬೆಳೆಯುವಾಗ ಕಲಿತ ರೀತಿಗಳು. ಆ ರೀತಿಗಳನ್ನು ಕಲಿಯುವುದು ಅಷ್ಟು ಕಷ್ಟವಾಗಿರಲಿಕ್ಕಿಲ್ಲ; ಆದರೆ ಅವುಗಳನ್ನು ಮರೆಯುವುದಂತೂ ಬಹು ಕಷ್ಟ. ಇದನ್ನರಿಯದೆ ಈ ಒಂದು ಬದಲಾವಣೆಯನ್ನು ತರಲು ನಡೆಸಿದ ನಮ್ಮ ಸರಕಾರದ ಅನೇಕ ಪ್ರಯತ್ನಗಳು ಸಫಲವಾಗಿಲ್ಲ.

ಇಂದು ಸರಕಾರವು ತನ್ನ ಅನೇಕ ಆಡಳಿತ ಶಾಖೆಗಳ ಮೂಲಕ ಸಾಕಷ್ಟು ಪ್ರಯತ್ನ ನಡೆಸಿದೆ. ಇವುಗಳಲ್ಲಿ ನಮ್ಮ

ಸಮಾಜ ಶಿಕ್ಷಣಾಧಿಕಾರಿಗಳು ಮತ್ತು ನಾವು ಎಲ್ಲೆಲ್ಲೂ ಕಾಣುವ ಫಲಕಗಳು (Posters) ಸೇರಿವೆ. ನಮ್ಮ ಸಮಾಜ ಶಿಕ್ಷಣಾಧಿಕಾರಿಗಳನೇಕರು ತಾವೇನು ಮಾಡಬೇಕು. ಹೇಗೆ ಮಾಡಬೇಕೆಂಬುದನ್ನರಿಯದೆ ತೊಳಲುತ್ತಿದ್ದಾರೆ. ಇದನ್ನು ನಾವು ನೋಡುವ ಫಲಕಗಳು ಜನತೆಯಲ್ಲಿ ತಿಳುವಳಿಕೆ ತರುವುದನ್ನು ಬಿಟ್ಟು ಅನೇಕ ವೇಳೆ ಗೊಂದಲವನ್ನೇ ತಂದಿವೆ. ಇದಕ್ಕೆ ಕಾರಣ ನಾವು ಉಪಯೋಗಿಸಿರುವ ಭಾಷೆ, ಪದಗಳು ಮತ್ತು ಚಿತ್ರಗಳೇ ಕಾರಣ. ಉದಾಹರಣೆಗೆ. ನಾವಾಡುವ ಕನ್ನಡ ಭಾಷೆಯನ್ನು ತೆಗೆದುಕೊಳ್ಳೋಣ. ಇದು ಒಂದೇ ಆದರೂ ಕನ್ನಡವು ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತದೆ. ಇಂತಹದರಲ್ಲಿ ದಿಲ್ಲಿಯಲ್ಲಿಯೋ, ಮದ್ರಾಸಿನಲ್ಲಿಯೋ ತಯಾರಾದ ಫಲಕಗಳು ಈ ವಿವಿಧ ಪ್ರದೇಶಗಳಲ್ಲಿ ಬೇರೆಯೇ ಆದ ಅರ್ಥವನ್ನು ಅಥವಾ ಭಾವನೆಯನ್ನು ಕೊಡುತ್ತವೆ. ಅದರಲ್ಲೂ ಅನಕ್ಷರಸ್ಥರಿಗೆ ಅನುಕೂಲವಾಗುವಂತೆ ಚಿತ್ರಗಳನ್ನೂ ಕೊಟ್ಟಿರುತ್ತಾರೆ. ಉದಾಹರಣೆಗೆ ಕುಟುಂಬ ಯೋಜನೆಯ ಫಲಕಗಳನ್ನೇ ತೆಗೆದುಕೊಳ್ಳೋಣ. "ಚಿಕ್ಕ ಸಂಸಾರ ಚೊಕ್ಕ ಸಂಸಾರ" ವೆನ್ನುವ ಫಲಕವನ್ನು ನಾವು ಎಲ್ಲೆಲ್ಲೂ ಕಾಣುತ್ತೇವೆ. ಇದರಲ್ಲಿ ದಷ್ಟಪುಷ್ಟವಾದ ಮಕ್ಕಳನ್ನು ಎತ್ತಿಕೊಂಡ ತಂದೆ–ತಾಯಿಂದಿರು ಇರುತ್ತಾರೆ. ಈ ಚಿತ್ರವನ್ನು ನೋಡಿ ಜನತೆಯಲ್ಲಿ ಬರುವ ಭಾವನೆಯನ್ನು ನಾವು ಡಾ॥ ಈಶ್ವರನ್, ಅವರ ಅನುಭವದಿಂದ ತಿಳಿಯಬಹುದು— ಇಂತಹ ಒಂದು ಫಲಕವನ್ನು ತಮ್ಮ ನಿವೇದಕರೊಬ್ಬರಿಗೆ(Informant) ತೋರಿಸಿ 'ಇದನ್ನು ನೋಡಿದರೆ ಏನನ್ನಿಸುತ್ತದೆ'' ಎಂದು ಡಾ॥ ಈಶ್ವರನ್ ಕೇಳಿದರಂತೆ. ನಾಲ್ಕು ಮಕ್ಕಳ ತಂದೆಯಾದ ಈ ನಿವೇದಕ

ಹೇಳಿದ ಉತ್ತರ ಎಂಥವರನ್ನೂ ಚಕಿತರನ್ನಾಗಿ ಮಾಡುತ್ತದೆ. “ಗರ್ಭದಲ್ಲಿಯೇ ಮಗು ಹೆಚ್ಚಾಗಿ ಬೆಳೆದರೆ ಹೆರಿಗೆ ತೊಂದರೆಯಾಗುತ್ತದೆ ಎಂಬುದು ನಮ್ಮ ನಂಬಿಕೆ ಇತ್ತು. ಇದರಂತೆ ನಮ್ಮ ಹೆಂಗಸರು ಹೆರಿಗೆಯ ದಿನಗಳು ಸಮೀಪಿಸಿದಂತೆ ಸರಿಯಾಗಿ ಊಟ ಮಾಡುತ್ತಿರಲಿಲ್ಲ. ಈ ಒಂದು ಚಿತ್ರ ನೋಡಿದರೆ ಇಂದು ಈ ತೊಂದರೆ ಇಲ್ಲವೆಂದು ಕಾಣುತ್ತದೆ. ಇಂತಹ ದಷ್ಟ–ಪುಷ್ಟ ಮಕ್ಕಳನ್ನು ಹೆತ್ತರೂ ಈ ಹೆಂಗಸು ಎಷ್ಟು ದಪ್ಪಾಗಿದ್ದಾಳೆ. ನಮ್ಮ ಮುಂದಿನ ಮಗು ಇದೇ ರೀತಿ ಇರಬೇಕೆಂದು ನಾವು ತಯಾರಿ ನಡೆಸಿದ್ದೇವೆ” ಎಂದನಂತೆ.*

ಇನ್ನು ಅಕ್ಷರಸ್ಥರ ಗೋಳನ್ನು ನೋಡೋಣ. ನಾವು ಎಲ್ಲೆಲ್ಲೂ “ಆರತಿಗೊಬ್ಬ ಮಗಳು, ಕೀರುತಿಗೊಬ್ಬ ಮಗ” ಎನ್ನುವ ಫಲಕವನ್ನು ಓದುತ್ತೇವೆ. ಇದನ್ನು “ಆರತಿ–ಗೊಬ್ಬ ಮಗಳು, ಕೀರತಿ–ಗೊಬ್ಬ–ಮಗ” ಎಂದೂ “ಆರತಿಗೊಬ್ಬ–ಮಗಳು, ಕೀರತಿ–ಗೊಬ್ಬ ಮಗ” ಎಂದೂ ಬರೆದಿರುವುದನ್ನು ನಾನು ನೋಡಿದ್ದೇನೆ. ಇದನ್ನೋದಿದರೆ ತಕ್ಕಷ್ಟು ವಿದ್ಯೆ ಇದ್ದವರಿಗೆ ಏನೂ ತಿಳಿಯುವುದಿಲ್ಲ. ಹೆಚ್ಚಿನ ವಿದ್ಯೆ ಇದ್ದವರ ಗಮನ ವ್ಯಾಕರಣದ ಮೇಲೆ ಹೋಗುತ್ತದೆಯೇ ವಿನಾ ಇದರ ಅರ್ಥ ಮತ್ತು ಉದ್ದೇಶಗಳ ಮೇಲೆ ಹೋಗುವುದಿಲ್ಲ. ಅಲ್ಲದೆ ನಾವು ಯಾವ ತರಹದ ಜನರಿಗೆ ಉಪಯೋಗವಾಗಲೆಂದು ಫಲಕಗಳನ್ನು ಬರೆದಿದ್ದೇವೆ, ಎಂಬುದೂ ಮುಖ್ಯ. ಬೆಂಗಳೂರಿನ ಪಾರ್ಕ ಒಂದರಲ್ಲಿ “ಹುಲ್ಲಿನ ಮೇಲೆ ನಡೆಯಬಾರದು” ಎಂದು

---

* ಡಾ. ಈಶ್ವರನ್ ಅವರನ್ನು ನಾನು ಸಂದರ್ಶಿಸಿದಾಗ ಅವರು ಈ ಈ ವಿಷಯವನ್ನು ಹೇಳಿದರು.

ಆಂಗ್ಲ ಭಾಷೆಯಲ್ಲಿ ಬರೆದ ಫಲಕಗಳನ್ನು ನೋಡಿದ್ದೇನೆ. ಇದು ಮುಖ್ಯವಾಗಿ ಒಂದು ಕಚೇರಿಯಿಂದ ಇನ್ನೊಂದು ಕಚೇರಿಗೆ ಕಾಗದ-ಪತ್ರಗಳನ್ನು ಒಯ್ಯುತ್ತಿರುವ ಸಿಪಾಯಿಗಳನ್ನುದ್ದೇಶಿಸಿ ಬರೆದುದು. ಫಲಕವಿದ್ದರೂ ಅಡ್ಡ ಓಡಾಡುತ್ತಿದ್ದ ಒಬ್ಬನನ್ನು ಅಧಿಕಾರಿಗಳೊಬ್ಬರು ನಿಲ್ಲಿಸಿ ಕೇಳಿದರಂತೆ. ಅದಕ್ಕೆ ಅವನು ಕೊಟ್ಟ ಉತ್ತರ ಇಲ್ಲಿ ನಮಗೆ ಬಹು ಮುಖ್ಯ. ಆಂಗ್ಲ ಭಾಷೆಯನ್ನು ಓದಲು ಬರದ ಅವನಿಗೆ ಈ ಫಲಕದಲ್ಲಿ ಬರೆದಿರುವುದು —"ವಿಧಾನಸೌಧಕ್ಕೆ ಹೋಗುವ ದಾರಿ." "ಕೋರ್ಟಿಗೆ ಹೋಗುವ ದಾರಿ"-ಎಂದನಂತೆ. ಅಲ್ಲದೆ ನಾವು ಫಲಕಗಳನ್ನು ಹಾಕುವುದು ಸಾಮಾನ್ಯವಾಗಿ ಜನತೆಯ ಅನುಕೂಲಕ್ಕಲ್ಲದೆ ಅನಾನುಕೂಲಕ್ಕಲ್ಲ. ಈ ಒಂದು ಭಾವನೆ ಇದ್ದ ಅವನು ಜೊತೆಗೆ ಆಂಗ್ಲ ಭಾಷೆ ಬೇರೆ ತಿಳಿಯದೆ, ಇದು ಹೋಗುವವರಿಗೆ ಮಾರ್ಗದರ್ಶನ ನೀಡುವ ಫಲಕವೆಂದು ಅರ್ಥಕಲ್ಪಿಸಿ ಕೊಂಡದ್ದು ಅವನ ತಪ್ಪಲ್ಲ; ಇವನ್ನು ಬರೆಸಿದವರ ತಪ್ಪು. ಅವರು ಈ ಎಲ್ಲಾ ವಿಷಯಗಳನ್ನು ಗಮನಕ್ಕೆ ತೆಗೆದುಕೊಂಡಿದ್ದರೆ ಯಾವ ತೊಂದರೆಯೂ ಬರುತ್ತಿರಲಿಲ್ಲ. ಇದೇ ರೀತಿ ಎಲ್ಲ ರಂಗಗಳಲ್ಲಿಯೂ ಈ ವಿಷಯವನ್ನು ಗಮನಕ್ಕೆ ತೆಗೆದುಕೊಂಡಲ್ಲಿ ನಾವು ಜನತೆಯಲ್ಲಿ ತರಬೇಕೆಂದಿರುವ ಬದಲಾವಣೆ ಅಷ್ಟೇನೂ ಕಷ್ಟವಾಗಲಾರದು. ಜನರ ನಡವಳಿಕೆಯನ್ನು ಮುಖ್ಯವಾಗಿ ಅಭ್ಯಸಿಸುವ ಮಾನವಶಾಸ್ತ್ರವು ಜನರಿಗೆ ಒಳ್ಳೆಯದಾಗುವ ರೀತಿಗಳನ್ನು ಅನುಷ್ಠಾನಕ್ಕೆ ತರುವುದರಲ್ಲಿ ಪರಿಣಾಮಕಾರಿಯಾಗಿ ನೆರವಾಗಲು ಸಾಧ್ಯವಿದೆ ಎಂಬುದು ಈ ಮೇಲೆ ವಿವರಿಸಿದ ಅನೇಕ ಪ್ರಸಂಗಗಳಿಂದ ಅರ್ಥವಾಗುತ್ತದೆ.

# ೫. ವೈದ್ಯಕೀಯ ರಂಗದಲ್ಲಿ ಮಾನವಶಾಸ್ತ್ರ

## (Anthropology in Medicine)

ಆರೋಗ್ಯ, ನೈರ್ಮಲ್ಯ ಮತ್ತು ರೋಗ–ರುಜೆಗಳು ಮತ್ತು ಅವುಗಳ ನಿವಾರಣೋಪಾಯಗಳ ಬಗ್ಗೆ ಮಾಹಿತಿ ಇರುವ ವಿದ್ಯಾವಂತರನ್ನು ಗಮನಕ್ಕೆ ತೆಗೆದುಕೊಳ್ಳದೆ, ಸಂಪ್ರದಾಯಸ್ಥರಾದ ಗ್ರಾಮಸ್ಥರು ಮತ್ತು ಆದಿವಾಸಿಗಳನ್ನು ಮಾತ್ರ ಇಲ್ಲಿ ಗಮನಕ್ಕೆ ತೆಗೆದುಕೊಳ್ಳಲಾಗಿದೆ. ಈ ಗುಂಪುಗಳಿಗೆ ಸೇರಿದ ವ್ಯಕ್ತಿಯೊಬ್ಬನನ್ನು ತೆಗೆದುಕೊಂಡು, "ಮನುಷ್ಯನಿಗೆ ಅಥವಾ ದನಕರುಗಳಿಗೆ ರೋಗಗಳು ಏಕೆ ಬರುತ್ತವೆ ಮತ್ತು ಯಾವ ರೀತಿಯಿಂದ ಬರುತ್ತವೆ?" ಎಂದು ಕೇಳಿದರೆ, "ಇವು ದುಷ್ಟಭೂತಗಳಿಂದ, ಮಾಯೆ–ಮಾಟಗಳಿಂದ ಮತ್ತು ಮುನಿದ ಪಿತೃಗಳಿಂದ ಬರುತ್ತವೆ" ಎನ್ನುತ್ತಾನೆ. ಅಂದರೆ ಆರೋಗ್ಯಕ್ಕೂ, ನೈರ್ಮಲ್ಯಕ್ಕೂ ಯಾವ ಸಂಬಂಧವೂ ಇಲ್ಲವೆಂದು ಇವನಂಥವರ ಭಾವನೆ. ಆದರೆ ಆಧುನಿಕ ವೈದ್ಯಕೀಯ ಶಾಸ್ತ್ರದಂತೆ ರೋಗಗಳು ರೋಗಾಣುಗಳಿಂದ ಬರುತ್ತವೆ; ಇವು ಒಬ್ಬರಿಂದ ಮತ್ತೊಬ್ಬರಿಗೆ ನೇರವಾಗಿ ತಲುಪಬಲ್ಲವು ಎಂಬುದನ್ನು ಈ ಜನರಿಗೆ ತಿಳಿಯಪಡಿಸುವುದು ಒಂದು ದೊಡ್ಡ ಸಾಹಸವಾಗುತ್ತದೆ. ಮುಂದೆ ತನ್ನ ನೋವನ್ನು ನಿವಾರಿಸಿಕೊಳ್ಳಲು ಅಥವಾ ಸಾವಿನಿಂದ ಪಾರಾಗಲು ಒಬ್ಬನು ಅನೇಕ ಸಾಧನೆಗಳ ಜೊತೆಗೆ ಆಧು

ನಿಕ ವೈದ್ಯಕೀಯ ಶಾಸ್ತ್ರದ ಸಹಾಯವನ್ನೂ ತೆಗೆದುಕೊಳ್ಳಲ ಒಪ್ಪಬಹುದು. ಇದರಿಂದ ಅವನಿಗೆ "ವೈದ್ಯಕೀಯ ಶಾಸ್ತ್ರದಲ್ಲಿ ಪೂರ್ಣನಂಬಿಕೆ ಬಂದಿದೆ" ಎಂಬುದನ್ನು ತೋರಿಸದೆ ಅವನು ತನ್ನ "ಜೀವವನ್ನುಳಿಸಿಕೊಳ್ಳಲು ನಡೆಸಿರುವ ಪ್ರಯತ್ನಗಳಲ್ಲಿ ಇದೂ ಒಂದು" ಎಂದು ಅರಿವಾಗುತ್ತದೆ. ಇಂದು ಅನೇಕ ಸಮಾಜಗಳು ತಮ್ಮ ಜನತೆಗೆ ಪುಕ್ಕಟೆಯಾಗಿ ಔಷಧೋಪಚಾರವನ್ನು ಒದಗಿಸುವ ಯೋಜನೆಗಳನ್ನು ಇಟ್ಟುಕೊಂಡಿವೆ. ಆದರೆ ಜನತೆಯೂ ಈ ಒಂದು ಉಪಯೋಗವನ್ನು ಪೂರ್ಣ ಪಡೆದುಕೊಳ್ಳಲು ಸಿದ್ಧರಾಗಿಲ್ಲ. ಇದಕ್ಕೆ ಜನತೆಯಲ್ಲಿನ ಮೂಢನಂಬಿಕೆಗಳು ಮತ್ತು ಸರಕಾರದ ವ್ಯವಸ್ಥೆಯಲ್ಲಿರುವ ಅನೇಕ ನ್ಯೂನತೆಗಳೂ ಕಾರಣವಾಗಿವೆ.

ಸಂಪ್ರದಾಯಸ್ಥ ಜನರ ನಂಬಿಕೆಯಂತೆ ಎಲ್ಲೆಲ್ಲಿಯೂ ಭೂತಗಳಿರುತ್ತವೆ. ಈ ಭೂತಗಳನ್ನು ಮೂರು ಬಗೆಗಳಾಗಿ ವಿಂಗಡಿಸಬಹುದು. ಮೊದಲನೆಯದಾಗಿ **ಕಿಡಿಗೇಡಿಗಳು** ಇವು, ಹಳೆಯ ಮರಗಳು, ದೊಡ್ಡ ಬಂಡೆಗಳು, ಒಂಟಿಮರ, ಸ್ಮಶಾನ ಮುಂತಾದ ಕಡೆ ವಾಸವಾಗಿರುತ್ತುವೆ. ಇವುಗಳ ವಾಸ್ಥಳದ ಬಳಿ ಯಾರಾದರೂ ತಿಳಿಯದೆ ಬಂದರೆ ಅವರಲ್ಲಿ ರೋಗಗಳನ್ನು ತರುತ್ತವೆ. ಇವುಗಳ ನಿವಾರಣೆಗೆ ದೇವರನ್ನು ಅಥವಾ ಇವಕ್ಕಿಂತಲೂ ಶಕ್ತಿಯುತವಾದ ಮತ್ತು ಸಹಾಯಕ ಭೂತಗಳ ನೆರವನ್ನು ಪಡೆಯಬೇಕು. ಅವುಗಳ ಪೂಜೆ—ಆಹುತಿಗಳು ಮುಗಿದನಂತರ ಮಾಂತ್ರಿಕನು ಈ ದೊಡ್ಡ ಭೂತ ಅಥವಾ ದೇವರಿಂದ ಶಕ್ತಿ ಪಡೆದು ಕಿಡಿಗೇಡಿ ಭೂತವನ್ನು ರೋಗಿಯಿಂದ ಓಡಿಸುತ್ತಾನೆ.

ಎರಡನೆಯ ಗುಂಪಿಗೆ, ಚಿತ್ರಗಳು, ಸಹಾಯಕ ಭೂತಗಳು ಹಾಗೂ ದೇವತೆಗಳು ಸೇರುತ್ತವೆ. ಮಾನವನು ತನ್ನ ಕರ್ತವ್ಯಗಳನ್ನು ಮರೆತಾಗ ಇವು ಅವನಿಗೆ ಇಲ್ಲವೆ ಅವನ ದನ-ಕರುಗಳಿಗೆ ರೋಗಗಳನ್ನು ತರುತ್ತವೆ. ಇಲ್ಲಿಯೂ ಮಾಂತ್ರಿಕನು ಅಥವಾ ಪೂಜಾರಿಯು ಯಾರು ರೋಗ ತಂದಿದ್ದಾರೆ ಎಂಬುದನ್ನು ನಿರ್ಧರಿಸಿ ತಕ್ಕ ಪೂಜೆ-ಪುನಸ್ಕಾರಗಳನ್ನು ಮಾಡಿಸಿ ಮತ್ತು ಆಹುತಿಗಳನ್ನು ಕೊಡಿಸಿ, ರೋಗದ ನಿವಾರಣೆ ಮಾಡುತ್ತಾನೆ.

ಮೂರನೆಯದಾಗಿ, **ಮಾಟ,** ತಮಗೆ ಬೇಕಿಲ್ಲದ ಮನುಷ್ಯನನ್ನು, ಅವನ ದನ-ಕರುಗಳನ್ನು ಮತ್ತು ಬೆಳೆಗಳನ್ನು ಮಾಟ ಮಾಡಿಸಿ ನಾಶಮಾಡಬಹುದು. ಮಾಟಮಾಡುವುದಕ್ಕೆ ಆ ವ್ಯಕ್ತಿಗೆ ಸೇರಿದ ಉಗುರು, ಕೂದಲು, ಮಲ-ಮೂತ್ರ ಮುಂತಾದ ಯಾವುದಾದರೊಂದು ವಸ್ತು ಬೇಕಾಗುತ್ತದೆ. ಇದನ್ನು ಪಡೆದು ಮಾಂತ್ರಿಕನು ಅದಕ್ಕೆ 'ಮಂತ್ರ' ಹಾಕಿ ಅದರ ಯಜಮಾನನಿಗೆ ತೊಂದರೆಯನ್ನುಂಟುಮಾಡುತ್ತಾನೆ. ಇದನ್ನರಿತ ರೋಗಿಯು ತನಗೆ ಕೇಡು ತಂದಿರುವ ಮಾಂತ್ರಿಕನಿ-ಗಿಂತಲೂ ಶಕ್ತಿವಂತನೊಬ್ಬನನ್ನು ಕರೆತಂದು ತನ್ನ ತೊಂದರೆಯನ್ನು ನಿವಾರಿಸಿಕೊಳ್ಳಬೇಕು. ಇವನನ್ನು ಯಾವ ಮಾಂತ್ರಿಕನೂ, ಯಾವ ಭೂತವೂ ಎಂದೆಂದಿಗೂ ತೊಂದರೆ ಕೊಡದಂತೆ "ತಾಯತ" ಮುಂತಾದವುಗಳನ್ನು ಕಟ್ಟಿಕೊಂಡಿರಬೇಕು. ಹೀಗೆ ಜನರು ಪ್ರತಿಯೊಂದು ರೋಗಕ್ಕೂ ತಮ್ಮದೇ ಆದ ರೀತಿಯಲ್ಲಿ ಚಿಕಿತ್ಸೆಯನ್ನು ಪಡೆಯುತ್ತಾರೆ. ಮುಂದೆ ರೋಗ ನಿವಾರಣೆಗೆ ಮಾಟ-ಮಂತ್ರಗಳ ಜೊತೆಗೆ ಗಿಡ-ಮೂಲಿಕೆಗಳನ್ನು

ದೇಹದೊಳಕ್ಕೆ ತೆಗೆದುಕೊಳ್ಳಲು ಮತ್ತು ಶರೀರದ ಮೇಲೆ ಲೇಪಿಸಲು ಉಪಯೋಗಿಸಲಾಗುತ್ತದೆ. ಈ ಒಂದು ಪದ್ಧತಿಯು ಆಧುನಿಕ ವೈದ್ಯಕೀಯ ಜ್ಞಾನವನ್ನು ಉಪಯೋಗಿಸುವದರಲ್ಲಿ ಪ್ರತಿಕೂಲವೂ ಆಗಬಹುದು, ನೆರವೂ ಆಗಬಹುದು.

ರೋಗಸ್ಥ ಸಂಬಂಧಿಯನ್ನು ಉಳಿಸಿಕೊಳ್ಳಲು ಅವನ ಸಂಬಂಧಿಕರು ಎಲ್ಲಾ ಬಗೆಯ ಸಹಾಯವನ್ನು ಪಡೆಯುತ್ತಿದ್ದರು; ಪಡೆಯುತ್ತಿದ್ದಾರೆ. ಇದರಲ್ಲಿ ಆಧುನಿಕ ವೈದ್ಯಕೀಯದ ನೆರವೂ ಸೇರುತ್ತದೆ. ಇದು ಹೆಚ್ಚು ಪರಿಣಾಮಕಾರಿಯಾದ್ದರಿಂದ ಜನರು ಇದರ ಬಗ್ಗೆ ಹೆಚ್ಚಿನ ಒಲವನ್ನು ತೋರಿಸತೊಡಗಿದ್ದಾರೆ. ಅಲ್ಲದೆ, ಸಮಾಜದಲ್ಲಿ ತಿಳುವಳಿಕೆ, ವಿದ್ಯಾಭ್ಯಾಸ ಮುಂತಾದವು ಹೆಚ್ಚಿದ್ದರಿಂದ ಜನರಲ್ಲಿ ಆರೋಗ್ಯ ಮತ್ತು ನೈರ್ಮಲ್ಯಗಳ ಬಗ್ಗೆ ಹೆಚ್ಚಿನ ತಿಳುವಳಿಕೆ ಬಂದು ಭೂತ ಮತ್ತು ಮಂತ್ರ-ಗಳಲ್ಲಿನ ನಂಬಿಕೆಯೂ ಕಡಿಮೆಯಾಗುತ್ತಿದೆ. ಆದರೂ ಜನತೆ ಮೊದಲಿನ ಯಾವೊಂದು ಪದ್ಧತಿಯನ್ನೂ ಪೂರ್ಣವಾಗಿ ಕೈಬಿಡಲಿಲ್ಲ. ಈ ಸ್ಥಿತಿಯು ಆಧುನಿಕ ವೈದ್ಯಕೀಯ ನೆರವನ್ನು ಜನತೆಗೆ ನೀಡುವಲ್ಲಿ ತೊಂದರೆಯನ್ನುಂಟು ಮಾಡುತ್ತದೆ.

ಅಂದರೆ, ಆಧುನಿಕ ವೈದ್ಯ ಪದ್ಧತಿಯನ್ನು ಪೂರ್ಣವಾಗಿ ಸ್ವೀಕರಿಸಿ, ಕ್ರಮಪ್ರಕಾರವಾಗಿ ವೃತ್ತಿಶಿಕ್ಷಣ ಪಡೆದುಬಂದ ವೈದ್ಯರಿಂದ ಔಷಧೋಪಚಾರ ಪಡೆಯಲು ಜನರು ಸಿದ್ಧರಾಗುವಲ್ಲಿ ಅನೇಕ ತೊಂದರೆಗಳು ಇವೆ. ಎಂಬುದು ಅರ್ಥವಾಗುತ್ತದೆ. ಆ ತೊಂದರೆಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ಸ್ಥೂಲವಾಗಿ ತಿಳಿದುಕೊಳ್ಳುವುದು ಅಗತ್ಯ.

ಮೊದಲನೆಯದಾಗಿ. ರೋಗಿ ಮತ್ತು ಅವನ ಸಂಬಂಧಿಕರ ಮನಸ್ಸಿನಲ್ಲಿರುವ ಭಯವನ್ನು ನಿವಾರಣೆ ಮಾಡಿ, ಅವರಲ್ಲಿ ಧೈರ್ಯ ತರುವಂಥ ಪ್ರಸಂಗದಲ್ಲಿರುವ ತೊಂದರೆಗಳು; ಸಂಪ್ರದಾಯಸ್ಥ ಸಮಾಜವಲ್ಲಿನ ಮಾಟಗಾರ ಅಥವಾ ನಾಟಿ–ವೈದ್ಯನು ಸರಿಯಾದ ಕಾರಣ ಹುಡುಕಲು ತನ್ನ ವಶದಲ್ಲಿನ ಭೂತಗಳ ಮತ್ತು ದೇವತೆಗಳ ನೆರವನ್ನು ಪಡೆಯುತ್ತಾನೆ. ಕೆಲವೆಡೆ ಮಂತ್ರ ಪಠಣಮಾಡಿ, ಬೆಂಕಿ ಮುಂತಾದುವನ್ನು ತರಿಸಿ ಹೊಗೆಯ ಮೋಡವನ್ನೇ ಏಳಿಸಿ ಜನತೆಯನ್ನು ಮರುಳುಮಾಡಿ ತಾನು ಈ ರೋಗವನ್ನು ಗುಣಪಡಿಸಬಲ್ಲನೆಂಬ ಭಾವನೆಯನ್ನು ರೋಗಿಯಲ್ಲಿ ತರುತ್ತಾನೆ. ಆದರೆ ಇಂದಿನ ವೈದ್ಯರು ಇಂತಹ ಯಾವೊಂದು "ತೊಂದರೆಯನ್ನೂ" ತೆಗೆದುಕೊಳ್ಳುವುದಿಲ್ಲ. ಮೇಲಾಗಿ ರೋಗಿಯನ್ನೇ ಅನೇಕ ಪ್ರಶ್ನೆ ಕೇಳಿ ಕಾಯಿಲೆಗೆ ಕಾರಣ ಹುಡುಕುವರಾದ್ದರಿಂದ ಇವರು 'ಏನೂ ತಿಳಿದ ವೈದ್ಯರೆಂಬ ಭಾವನೆ ರೋಗಿಯಲ್ಲೂ, ಅವನ ಬಂಧುಗಳಲ್ಲೂ ಬರುತ್ತದೆ.'

ಎರಡನೆಯದಾಗಿ, ರೋಗಿಗೆ ಆಗುವ ದೈಹಿಕ ನೋವು: ಸಂಪ್ರದಾಯಸ್ಥ ಸಮಾಜದ ವೈದ್ಯನು ರೋಗಿಯ ದೇಹಕ್ಕೆ ಬಹುಶಃ ಭೂತ ಚೇಷ್ಟೆಯ ಸಂದರ್ಭಗಳನ್ನು ಹೊರತು ಯಾವ ನೋವನ್ನೂ ಮಾಡುವುದಿಲ್ಲ. ಇದಕ್ಕೆ ವಿರುದ್ಧವೆನ್ನುವಂತೆ ಇಂದಿನ ವೈದ್ಯರು ಮದ್ದು ಚುಚ್ಚುತ್ತಾರೆ ಮತ್ತು ಅನೇಕ ವೇಳೆ ಶಸ್ತ್ರಚಿಕಿತ್ಸೆ ಮಾಡುತ್ತಾರೆ. ಇದು ಅನೇಕರಿಗೆ ಭಯ ತರುತ್ತದೆ. "ಆಪರೇಶನ್" ಎನ್ನುವ ಪದ ಇನ್ನೇನು ರೋಗಿಯ

ಬದುಕಲಾರನೆಂಬ ಭಯವನ್ನು ಉಂಟುಮಾಡುವಂಥ ಶಬ್ದವಾಗಿದೆ. ಆದ್ದರಿಂದ ತಮ್ಮ ಮೈಮೇಲೆ ಎಂತಹ ದೊಡ್ಡ ಗಾಯವಾದರೂ ಹೆದರದೆ ನಾಟಿ ಔಷಧಗಳಿಂದ ಪಟ್ಟಿ ಕಟ್ಟಿಸಿಕೊಳ್ಳುವ ಮನುಷ್ಯ ಒಂದು ಸಣ್ಣ 'ವೆಸೆಕ್ಟಮಿ' ಆಪರೇಷನ್‌ಗೆ ಹೆದರುತ್ತಾನೆ. ಇದಕ್ಕೆ ಜನರಲ್ಲಿ ಆಳವಾಗಿ ಬೇರೂರಿರುವ ಭಯವೇ ಕಾರಣವಾಗಿದೆ. ಇದನ್ನು ನಿವಾರಿಸಲು ಅನೇಕ ವೇಳೆ ಸಾಧ್ಯವಾಗುವುದಿಲ್ಲ. 'ನಾನು ಸತ್ತರೂ ಚಿಂತೆಯಿಲ್ಲ, ಮೈಕೈಗಳನ್ನು ತೂತು ಮಾಡಿಸಿಕೊಂಡು ಸಾಯುವುದು ಬೇಡ' ಎಂದು ಅನೇಕ ವೇಳೆ ಆಸ್ಪತ್ರೆಗೆ ಸೇರಿದ ರೋಗಿಗಳು ಚಿಕಿತ್ಸೆ ಪಡೆಯದೆ ಮನೆಗೆ ಹಿಂದಿರುಗಿರುವ ಉದಾಹರಣೆಗಳಿವೆ.

ಮೂರನೆಯದಾಗಿ, ಆಧುನಿಕ ವೈದ್ಯರ ಮತ್ತು ಆಸ್ಪತ್ರೆಗಳ ಬಗ್ಗೆ ಜನತೆಯಲ್ಲಿನ ತಪ್ಪುಭಾವನೆ : ಸರಕಾರ ಮತ್ತು ಆಸ್ಪತ್ರೆಗಳ ಅಧಿಕಾರಿ ವರ್ಗದವರಲ್ಲಿ ಜನತೆಯ ಸಂಸ್ಕೃತಿ ಮತ್ತು ನಡೆ–ನುಡಿಗಳ ಬಗ್ಗೆ ಸರಿಯಾದ ಮಾಹಿತಿ ಇಲ್ಲದಿರುವುದು ಇಂಥ ಪ್ರಸಂಗಕ್ಕೆ ಎಡೆಯಾಗುತ್ತದೆ. ವಾರ್ಡಿಗೆ ಬಂದ ರೋಗಿಯಲ್ಲಿ 'ತನ್ನನ್ನು ತನ್ನ ಸಂಬಂಧಿಕರು ಮತ್ತು ವೈದ್ಯರು ತಾತ್ಸಾರದಿಂದ ನೋಡುತ್ತಿದ್ದಾರೆ' ಮತ್ತು 'ನಾನು ಒಂಟಿಯಾಗಿದ್ದೇನೆ' ಎನ್ನುವ ಭಾವನೆ ಬರುವ ಸಾಧ್ಯತೆಯೇ ಹೆಚ್ಚು.

ಸಂಪ್ರದಾಯಸ್ಥ ಸಮಾಜದಲ್ಲಿ ಜನರು ತಮ್ಮ ತಮ್ಮಲ್ಲಿ ನೇರ ಸಂಬಂಧವನ್ನಿಟ್ಟುಕೊಂಡಿರುತ್ತಾರೆ. ಇವರ ಸಂಬಂಧಗಳು ಋಣ (Obligation) ಗಳ ಬಲೆಯ ಅವಿಭಾಜ್ಯ ಅಂಗಗ-ಳಾಗಿರುತ್ತವೆ. ಇದರಂತೆ ಯಾವೊಬ್ಬ ವ್ಯಕ್ತಿಗೆ ಏನೇ ತೊಂದರೆ

ಯಾದರೂ ಬಂಧು-ಬಾಂಧವರು ಬಂದು ತಮ್ಮ ಯೋಗ್ಯತೆಗೆ ಅನುಸಾರವಾಗಿ ಸಹಾಯ ಮಾಡುತ್ತಾರೆ. ಇದೇ ರೀತಿ ಯಾರಾದರೊಬ್ಬರು ರೋಗಸ್ಥರಾದರೆ ಪ್ರತಿಯೊಬ್ಬರೂ ಬಂದು ಅವನ ಆರೋಗ್ಯವನ್ನು ವಿಚಾರಿಸಿಕೊಳ್ಳುತ್ತಾರೆ; ತಮಗೆ ತಿಳಿದ ಔಷಧಿಗಳು ಮತ್ತಿತರ ಸಲಹೆ ಕೊಡುತ್ತಾರೆ. ಒಂದು ಮಾತಿನಲ್ಲಿ ಹೇಳುವುದಾದರೆ, ಎಲ್ಲರೂ ಅವನ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸುತ್ತಾರೆ. ಬಂದವರು ಗಂಟೆಗಟ್ಟಲೆ ಕೂಡುತ್ತಾರೆ. ವೈದ್ಯನೂ ಸಹ ತನಗೆ ತಿಳಿದ ಎಲ್ಲಾ ಔಷಧಿಗಳನ್ನೂ ಉಪಯೋಗಿಸುತ್ತಾನೆ; ತನ್ನ ಹೆಚ್ಚು ಕಾಲವನ್ನು ರೋಗಿಯ ಬಳಿಯೇ ಕಳೆಯುತ್ತಾನೆ. ಮನೆಯವರೂ ಬಂದವರಿಗೆ ಮತ್ತು ವೈದ್ಯರಿಗೆ ಆತಿಥ್ಯ ಮಾಡುತ್ತಾ ಅವನೆದುರಿಗೆ ಇರುತ್ತಾರೆ. ಇದು ರೋಗಿಗೆ ಒಂದು ಬಗೆಯ ಧೈರ್ಯವನ್ನೇ ತರುತ್ತದೆ. ಮತ್ತು ಎಲ್ಲರ ಗಮನವೂ ತನ್ನಲ್ಲಿಯೇ ಕೇಂದ್ರೀಕೃತವಾಗಿದೆ ಎಂದು ಭಯಪಡುವುದಿಲ್ಲ.

ಇಂತಹ ಒಂದು ಪರಿಸ್ಥಿತಿಯಿಂದ ಒಬ್ಬ ರೋಗಿಯನ್ನು ನಾವು ಆಸ್ಪತ್ರೆಯ ವಾರ್ಡಿಗೆ ತಂದರೆ ಇಲ್ಲಿ ಹೆಚ್ಚೆಂದರೆ ದಿನಕ್ಕೆ ಒಂದೆರಡು ಬಾರಿ ಮಾತ್ರ ಬರುವ ವೈದ್ಯರು ಮತ್ತು ಸದಾ ಇದ್ದರೂ ಸಿಬ್ಬಂದಿ ವರ್ಗದವರು ವರ್ತಿಸುವ ರೀತಿಗಳು 'ತನ್ನನ್ನು ಕಡೆಗಾಣಿಸುತ್ತಿದ್ದಾರೆ' ಎಂಬ ಭಾವನೆಯನ್ನು ರೋಗಿಯು ಹೊಂದುವಂತೆ ಮಾಡುತ್ತವೆ. ರೋಗಿಯ ಬಳಿ ಇರಲು ಸಂಬಂಧಿಕರಿಗೆ ಬಿಡುವುದಿಲ್ಲ ಮತ್ತು ಮನೆಯಿಂದ ಒಬ್ಬಿಬ್ಬರು ಮಾತ್ರ ಆಸ್ಪತ್ರೆಗೆ ಇವನೊಡನೆ ಬಂದಿರುತ್ತಾರೆ. ಇಲ್ಲಿಗೆ ಸ್ನೇಹಿತರು ಮತ್ತು ಸಂಬಂಧಿಕರಾರೂ ವಿಶೇಷವಾಗಿ

ಬರುವುದಿಲ್ಲ. ಈ ಒಂದು ವಾತಾವರಣವು ಅವನ ಮನಸ್ಸಿನ ಮೇಲೆ ಕೆಟ್ಟ ಪರಿಣಾಮ ಮಾಡಿ ಎಲ್ಲರೂ ತನ್ನನ್ನು ತಾತ್ಸಾರ ಮಾಡುತ್ತಿದ್ದಾರೆ, ಎನ್ನುವ ಭಾವನೆ ಬಂದು ಅವನಿಗೆ ಬದುಕುವ ಧೈರ್ಯ ಉಳಿಯುವುದಿಲ್ಲ. ಅವನ ಆಸ್ಪತ್ರೆಯಲ್ಲಿನ ಜೀವನವು ಕಹಿಯಾಗುತ್ತದೆ. ಹೀಗಾಗಿ ತನ್ನನ್ನು ಮನೆಗೆ ಕರೆದುಕೊಂಡು ಹೋಗಿರೆಂದು ಅವನು ಒಂದೇಸಮನೆ ಕಾಡುತ್ತಾನೆ.

ಇದು ರೋಗಿಯ ಗೋಳಾದರೆ, ಅವನ ಸ್ನೇಹಿತರ ಮತ್ತು ಸಂಬಂಧಿಕರದು ಬೇರೆ ತೆರನಾದ ಗೋಳಾಗಿರುತ್ತದೆ. ತಮಗೆ ಸಂಬಂಧಿಸಿದ ವ್ಯಕ್ತಿಯನ್ನು ವಾರ್ಡಿಗೆ ಸೇರಿಸಿದ್ದಾರೆಂದರೆ ಅವನು ಉಳಿಯುವದಿಲ್ಲ. ಆದುದರಿಂದ ಅವನನ್ನು ನೋಡಲೇಬೇಕು ಎಂಬ ಆಸೆ ಅವರಲ್ಲಿ ತುಂಬಿರುತ್ತದ. ಈ ಒಂದು ಕಾರಣದಿಂದ ಅವರು ಅವನ "ಅಂತಿಮದರ್ಶನಕ್ಕೆ" ಬರುತ್ತಾರೆ. ಬಂದರೆ ಒಳಗೆ ಬಿಡುವುದಿಲ್ಲ, ಇಲ್ಲವೆ ಒಳಗೆ ಹೋಗಲು ನಿಯಮಿತ ವೇಳೆಗಳಿರುತ್ತವೆ. ತಮ್ಮ ಕಡೆಯವರೊಬ್ಬರು ಸಾಯುವ ಸ್ಥಿತಿಯಲ್ಲಿದ್ದಾನೆ. ಅವರನ್ನು ಕೊನೆಯದಾಗಿ ನೋಡಬೇಕು ಎಂದರೂ ಬಿಡುವದಿಲ್ಲವಾದ್ದರಿಂದ ಇವರಿಗೆ ಜುಗುಪ್ಸೆ ಬರುತ್ತದೆ. ಈ ಒಂದು ಭಾವನೆಯು ನೇರವಾಗಿ ಅಲ್ಲದಿದ್ದರೂ ತನ್ನ ಪರಿಣಾಮವನ್ನು ಪರೋಕ್ಷವಾಗಿ ಜನತೆಯ ಮೇಲೆ ಬೀರುತ್ತದೆ. ಮುಂದೆ ಯಾರಾದರೊಬ್ಬರು ವಾರ್ಡಿಗೆ ಹೋಗುತ್ತೇವೆಂದರೂ ಬೇಡವೆಂದು ಅವನಿಗೆ ಬುದ್ಧಿವಾದ ಹೇಳುತ್ತಾರೆ. ಜನತೆಯಲ್ಲಿನ ಇಂಥ ಅಭಿಪ್ರಾಯವು ವೈದ್ಯಕೀಯ ರಂಗದಲ್ಲಿ ಬಹು ಕೆಟ್ಟ ಪರಿಣಾಮವನ್ನುಂಟುಮಾಡುತ್ತದೆ.

ಇಂದು ಗ್ರಾಮೀಣ ಮತ್ತು ಆದಿವಾಸಿಗಳ ಸಮಾಜಗಳಲ್ಲಿ ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯಗಳ ಬಗ್ಗೆ ಹೆಚ್ಚು ಹೆಚ್ಚು ಗಮನ ಕೊಡಬೇಕೆಂಬುದು ಎಲ್ಲೆಲ್ಲೂ ಕೇಳಿಬರುತ್ತದೆ. ಮೊದಲಿಗೆ ಈ ಜನರಲ್ಲಿ ಆರೋಗ್ಯ ಮತ್ತು ನೈರ್ಮಲ್ಯಗಳ ಬಗ್ಗೆ ಹೆಚ್ಚಿನ ತಿಳುವಳಿಕೆ ಬರುವಂತೆ ಮಾಡಬೇಕು. ಈ ಕಾರ್ಯವು ಸಂಪೂರ್ಣವಾಗಬೇಕಾದರೆ ಮತ್ತು ಸುಗಮವಾಗಬೇಕಾದರೆ ನಾವು ಈ ಸಮಾಜಗಳನ್ನು ವಿಶೇಷ ರೀತಿಯಲ್ಲಿ ಅಭ್ಯಾಸಮಾಡಿ ಎಲ್ಲ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಬೇಕು. ಮೊದಲನೆಯದಾಗಿ, ಈ ಸಮಾಜಗಳಲ್ಲಿ ಆರೋಗ್ಯ ನೈರ್ಮಲ್ಯಗಳ ಬಗ್ಗೆ ತಮ್ಮದೇ ಆದ ತಿಳುವಳಿಕೆ ಇದೆಯೇ ಅಥವಾ ಇಲ್ಲವೆ ಎಂಬುದನ್ನು ತಿಳಿಯಬೇಕು. ಇದರಲ್ಲಿ ತಮ್ಮದೇ ಆದ ಮೌಲ್ಯಗಳಿದ್ದರೆ, ಅವು ಆಧುನಿಕ ಮೌಲ್ಯಗಳಿಂದ ಹೇಗೆ ಭಿನ್ನವಾಗಿವೆ ಮತ್ತು ಇವು ಉತ್ತಮವೇ ? ಅವನ್ನು ಬಿಡಬೇಕೆ ಅಥವಾ ಕೆಲವು ವಿಷಯಗಳಲ್ಲಿ ಬದಲಾವಣೆಯಾದ ಮೇಲೆ ಅವನ್ನು ಉಪಯೋಗಿಸಬೇಕೆ? ಎಂಬುವನ್ನು ನೋಡಬೇಕು. ಸ್ವೀಕಾರಾರ್ಹವಲ್ಲದುದಕ್ಕೆ ಒಂದು ಉದಾಹರಣೆ : ಆಧುನಿಕ ದೃಷ್ಟಿಯಿಂದ ಉತ್ತಮವಲ್ಲದ ಆಹಾರ ಪದಾರ್ಥಗಳು ಸಂಪ್ರದಾಯಸ್ಥ ಸಮಾಜದಲ್ಲಿನ ಜನರ ದೃಷ್ಟಿಯಿಂದ ಅತಿ ಉತ್ತಮವಾದುದಾಗಿರಬಹುದು. ಇಂಥಲ್ಲಿ ಬದಲಾವಣೆ ಅಗತ್ಯವಾಗುತ್ತದೆ. ಅದರ ಕೆಲವು ಆಚರಣೆಗಳು ಉತ್ತಮವಾಗಿರುತ್ತವೆ. ಉದಾಹರಣೆಗೆ, ಕೆಲವು ಗ್ರಾಮಗಳಲ್ಲಿ ಇಂದಿಗೂ ಗರಡಿಮನೆಗಳಿದ್ದು, ಸಾಮಾನ್ಯವಾಗಿ ಪ್ರತಿ ಕುಟುಂಬವೂ ಒಬ್ಬ ಮಗನನ್ನು ಗರಡಿಗೆ ಕಳುಹಿಸುತ್ತಿತ್ತು ಮತ್ತು ಅವನಿಗೆ ಉತ್ತಮವಾದ ಮತ್ತು

ಪೌಷ್ಟಿಕವಾದ ಆಹಾರವನ್ನು ಒದಗಿಸುತ್ತಿತ್ತು. ಇಂಥ ಪದ್ಧತಿಯು ಗ್ರಾಮೀಣ ಜನತೆಯ ಆರೋಗ್ಯ ಮತ್ತು ದೇಹದೃಢತೆಯನ್ನು ಕಾಪಾಡಿಕೊಳ್ಳಲು ಸಹಾಯವಾಗಿತ್ತು. ಇದೇ ರೀತಿ ಕೆಲವು ಸಮಾಜಗಳಲ್ಲಿ ರೋಗಿಗಳಿಗೆ, ಮಕ್ಕಳಿಗೆ, ವೃದ್ಧರಿಗೆ ಮತ್ತು ತಾಯಂದಿರಿಗೆ ಬೇರೆಯೇ ಆದ ಉತ್ತಮ ಆಹಾರದ ವ್ಯವಸ್ಥೆ ಇರುತ್ತದೆ. ಉದಾಹರಣೆಗೆ, ಹಳ್ಳಿಗಾಡಿನಲ್ಲಿ ಬಾಣಂತಿಗೆ ಆಕೆಯ ತಾಯಿಯ ಇಲ್ಲವೆ ಗಂಡನ ಮನೆಯವರು, ಪೌಷ್ಟಿಕವಾದ ಆಹಾರವನ್ನು ತರುವ ಎಂದು ಪದ್ಧತಿಯೇ ಇದ್ದಿತು. ಈ ಪದ್ಧತಿಯನ್ನು ಸರಿಯಾಗಿ ಅನುಸರಿಸಿದವರು ತಮ್ಮ ಆರೋಗ್ಯವನ್ನು ಕಾಪಾಡಿಕೊಂಡಿದ್ದರು. ಇಂತಹ ಪದ್ಧತಿಗಳ ವ್ಯವಸ್ಥೆ ಇದ್ದರೆ, ಇದನ್ನು ವಿವರವಾಗಿ ಅಭ್ಯಾಸಮಾಡಿ ಉತ್ತಮವಾದುವನ್ನು ಸಂಪ್ರದಾಯದ ರೀತಿಯಲ್ಲಿಯೇ ಮುಂದುವರೆಯಲು ಬಿಡಬಹುದು.

ಆದರೆ ಇಂದು ಆಧುನಿಕತೆಯ ಗಾಳಿ ಬೀಸುತ್ತಿರುವುದರಿಂದ ಸಂಪ್ರದಾಯದ ರೀತಿಯಲ್ಲಿನ ಊಟ–ಉಪಚಾರಗಳನ್ನೂ ಕಡೆಗಣಿಸಲಾಗುತ್ತಿದೆ. ಉದಾಹರಣೆಗೆ, ನಾವು ಯಾವುದಾದರೊಂದು ಗ್ರಾಮವನ್ನು ತೆಗೆದುಕೊಂಡು ಅಲ್ಲಿಯವರ ಅಡಿಗೆ ಮತ್ತು ಊಟದ ಪದ್ಧತಿಗಳನ್ನು ಮತ್ತು ಕ್ರಮಗಳನ್ನು ಅಭ್ಯಾಸ ಮಾಡಿದರೆ, ಇಲ್ಲಿ ಆಯಾ ಋತುಗಳಿಗೆ ಅನುಗುಣವಾಗಿ ಅಂದರೆ ಚಳಿಗಾಲ, ಬೇಸಿಗೆ ಮತ್ತು ಮಳೆಗಾಲಕ್ಕನುಗುಣವಾದ ಅಡಿಗೆ ಮಾಡುತ್ತಿದ್ದರು. ಇಂತಹ ಹಬ್ಬಗಳಲ್ಲಿ ಇಂಥಾದ್ದೇ ಅಡಿಗೆ ಮಾಡಿ ದೇವರಿಗೆ ಎಡೆಮಾಡಬೇಕೆಂಬ ನಿಯಮವು ಇರುತ್ತಿತ್ತು. ಇದು ಆಯಾ ಸಮಾಜದ ಜನರು ಆಯಾ ಋತುಗಳಿಗೆ ಅನು

ಸಾರವಾಗಿ ಮಾಡಿ ಉಣ್ಣುತ್ತಿದ್ದ ಆಹಾರವನ್ನು ದೇವರಿಗೆ ಪ್ರಿಯವಾದ ಅಡುಗೆಯೆಂದು ಗಣಿಸಲಾಗುತ್ತಿತ್ತೆಂದು ಅರ್ಥವಾಗುತ್ತದೆ. ಆದರೆ ಇಂದಿನ ನಾಗರಿಕತೆಯಂತೆ ಈ ಹಳೆಯ ಪದ್ಧತಿಗಳು ಹೋಗಿ ಎಲ್ಲ ಹಬ್ಬಗಳಲ್ಲಿಯೂ ಒಂದೆರಡು ಬಗೆಯ ಅಡುಗೆ ಮಾಡಿ ಉಣ್ಣುವುದನ್ನು ನಾವು ಕಾಣುತ್ತೇವೆ. ಅಲ್ಲದೆ ಹೆರಿಗೆಯ ಸಂದರ್ಭದಲ್ಲಿ ಸಂಪ್ರದಾಯದ ರೀತಿಯ ಪೌಷ್ಟಿಕ ಆಹಾರವನ್ನು ('ಖಾರ') ತರುವುದು ಈಗಿನ ಅನೇಕ ಮಹಿಳೆಯರಿಗೆ ಅನಾಗರಿಕ ಪದ್ಧತಿಯಾಗಿ ಕಂಡುಬಂದು ಇದನ್ನು ತರುವುದೇ ಬೇಡವೆಂದು ತಿಳಿಸಿಬಿಡುತ್ತಾರೆ. ಇಂತಹ ಆಹಾರದ ಉಪಯೋಗ ಮತ್ತು ಆವಶ್ಯಕತೆ ತಿಳಿಯದೆ ಈ ಪದ್ಧತಿಗಳನ್ನು ಕೈಬಿಡುವುದರಿಂದ ಅವರ ಆರೋಗ್ಯ ಕೆಡುತ್ತದೆ. ಈ ಹಳೆಯ ಪದ್ಧತಿಯನ್ನು ಕೈಬಿಟ್ಟರೂ ಹೊಸ ನಮೂನೆಯಲ್ಲಿ ವೈದ್ಯಕೀಯ ರೀತಿಯಲ್ಲಿ ವಿಶೇಷ ಪೌಷ್ಟಿಕ ಆಹಾರವನ್ನು ತೆಗೆದುಕೊಳ್ಳಲು ಆರ್ಥಿಕ ಅನುಕೂಲತೆ ಇಲ್ಲದೆ ತಮ್ಮ ಆರೋಗ್ಯವನ್ನು ಕೆಡಿಸಿಕೊಳ್ಳುತ್ತಾರೆ ಇದರಿಂದ ಕುಟುಂಬಕ್ಕೆ, ಕಳ್ಳುಬಳ್ಳಿಯಲ್ಲಿ ಆಗುವ ತೊಡಕುಗಳನ್ನು ಮಾನವಶಾಸ್ತ್ರಜ್ಞನು ಅಭ್ಯಾಸಮಾಡಿ ಇದರ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲಬಲ್ಲನು.

ಇದೇ ರೀತಿಯಾಗಿ ಸಾಂಪ್ರದಾಯಿಕವಾಗಿ ಬಂದ ಕೆಲವು ಪದ್ಧತಿಗಳು ಆರೋಗ್ಯವನ್ನು ಕೆಡಿಸುತ್ತಿದ್ದರೂ ಇಂತಹ ಪದ್ಧತಿಗಳನ್ನು ಮೂಢನಂಬಿಕೆಯಿಂದ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಇವುಗಳಲ್ಲಿ ಮುಖ್ಯವಾದದ್ದು ಉಪವಾಸ-ವ್ರತ. ಭಾರತ ಮುಂತಾದ ಅಭಿವೃದ್ಧಿ ಹೊಂದುತ್ತಿರುವ ಮತ್ತು ಹಿಂದುಳಿದ ಸಮಾಜಗಳಲ್ಲಿ ಮುಕ್ಕಾಲುಪಾಲು ಜನ ದೇಹ ಪೋಷಣೆಗೆ ಅತ್ಯವಶ್ಯಕವಾಗಿ ಬೇಕಾಗಿರುವುದಕ್ಕಿಂತಲೂ

ಕಡಿಮೆ ಆಹಾರವನ್ನು ತಿನ್ನುತ್ತಿದ್ದಾರೆ. ಇಂತಹ ದೇಶಗಳಲ್ಲಿನ ಜನತೆಯ ಸಾಮಾನ್ಯ ಆರೋಗ್ಯಮಟ್ಟ ಬಹಳ ಕೆಳಮಟ್ಟದಲ್ಲಿರುತ್ತದೆ. ಇಂತಹ ಪರಿಸ್ಥಿತಿಯಲ್ಲಿಯೂ ಅನೇಕರು ಸಾಂಪ್ರದಾಯಿಕವಾಗಿ ನಡೆದು ಬಂದ ವಾರಕ್ಕೆ ಒಂದು ದಿನ ಮತ್ತು ಹಬ್ಬ–ಹರಿದಿನಗಳಲ್ಲಿ ಉಪವಾಸ ಮಾಡುತ್ತಾರೆ. ಮತ್ತೆ ಕೆಲವರು ತಮ್ಮ ದಿನನಿತ್ಯದ ಕಾರ್ಯಗಳು ಮುಗಿದು ಪೂಜೆ–ಪುನಸ್ಕಾರಗಳು ಮುಗಿಯದೆ ಏನನ್ನೂ ತಿನ್ನುವುದಿಲ್ಲ. ಇದು ಒಂದು ಊಟದಿಂದ ಮತ್ತೊಂದು ಊಟದ ನಡುವಿನ ಅಂತರವನ್ನು ಹೆಚ್ಚಿಸಿ ಅವರ ಕೃಶವಾದ ದೇಹವನ್ನು ಮತ್ತೂ ಕೃಶಮಾಡಿ ಮುಂದೆ ಕ್ಷಯ, ರಕ್ತಕ್ಷಯ, ರಕ್ತಹೀನತೆ ಮುಂತಾದ ದೊಡ್ಡ ದೊಡ್ಡ ರೋಗಗಳಿಗೆ ಎಡೆಮಾಡಿಕೊಡುತ್ತದೆ. ಜನತೆಯಲ್ಲಿ ಉಪವಾಸವ್ರತ ಮಾಡುವುದರಿಂದ ಪುಣ್ಯ ಬರುತ್ತದೆ. ಮಹಿಳೆಯರಿಗೆ ಸಂಬಂಧಿಸಿದಂತೆ ಪತಿಗೆ ಮತ್ತು ಮಕ್ಕಳಿಗೆ ಶ್ರೇಯಸ್ಸು ಬರುತ್ತದೆ ಮುಂತಾದ ನಂಬಿಕೆ ಇದೆ. ಇಂಥ ನಂಬಿಕೆಯಿಂದ ಅವರನ್ನು ವಿಮುಖಗೊಳಿಸಿ, ತಮ್ಮ ಆರೋಗ್ಯದ ಕಡೆಗೆ ಗಮನ ಹರಿಸುವಂತೆ ಮಾಡುವುದು ತೊಡಕಿನ ವಿಷಯ. ಇಂತಹ ಪರಿಸ್ಥಿತಿಗಳಲ್ಲಿ ಮಾನವಶಾಸ್ತ್ರಜ್ಞನು ಸಮಾಜದಲ್ಲಿನ ಅನೇಕ ನಿಯಮಗಳನ್ನು ಪದ್ಧತಿಗಳನ್ನು ಮತ್ತು ನಂಬಿಕೆಗಳನ್ನು ಅಭ್ಯಾಸಮಾಡಿ ಜನತೆಗೆ ಈ ಹಳೆಯ ಪದ್ಧತಿಗಳನ್ನು, ಸಾಧ್ಯವಾದರೆ ಸ್ವಲ್ಪ ತೊಂದರೆಯೊಂದಿಗೆ. ಕೈಬಿಡುವಂತೆ ಅಥವಾ ಬೇರೆ ಯಾವುದಾದರೂ ರೀತಿಯಲ್ಲಿ ಸಹಾಯ ಮಾಡಬಲ್ಲನು. ಇದರಂತೆ ಮಾನವಶಾಸ್ತ್ರಜ್ಞನ ಜ್ಞಾನವನ್ನು ಗ್ರಾಮೀಣ ಮತ್ತು ಆದಿವಾಸಿಗಳ ಸಮಾಜಗಳ ಅಭಿವೃದ್ಧಿ ಕಾರ್ಯದಲ್ಲಿಯೂ ಉಪಯೋಗಿಸಬಹುದು.

# ೬. ಅಭಿವೃದ್ಧಿಕಾರ್ಯದಲ್ಲಿ ಮಾನವಶಾಸ್ತ್ರ

ಯಾವೊಂದು ಸಮಾಜವೂ ಜಡಸ್ಥಿತಿಯಲ್ಲಿಲ್ಲ. (Static) ಕೆಲವು ತೀವ್ರಗತಿಯಿಂದ ಬದಲಾದರೆ ಉಳಿದವು ಮಂದಗತಿಯಿಂದ ಬದಲಾಗುತ್ತಿರುತ್ತವೆ. ಈ ಬದಲಾವಣೆಯು ಕೆಲವು ವೇಳೆ ಆಂತರಿಕ ಕಾರಣಗಳಾದ (Internal Causes) ಹೊಸ ಬಗೆಯ ವಸ್ತುಗಳನ್ನು ಕಂಡುಹಿಡಿದುದರ ಪರಿಣಾಮವಾಗಿ, ಪ್ರಕೃತಿಯ ವಿಕೋಪದಿಂದಾಗಿ ಬಂದುದಾಗಿರಬಹುದು. ಇಲ್ಲವೆ ಹೊರಗಿನಿಂದ ಬಂದ ಸಾಂಸ್ಕೃತಿಕ ಮತ್ತು ಸಾಮಾಜಿಕ ವಸ್ತುಗಳ ಮತ್ತು ವಿಷಯಗಳ ಪ್ರಭಾವದಿಂದ ಬಂದುದಾಗಿರಬಹುದು. ಯಾವುದೇ ಸಮಾಜವನ್ನು ತಗೆದುಕೊಂಡರೂ ಅಲ್ಲಿಯ ಜನರು ಏಕರೀತಿಯಿಂದ ಬದಲಾಗುವುದನ್ನು ಕಾಣವುದಿಲ್ಲ. ಇದಕ್ಕೆ ಜನತೆಯಲ್ಲಿನ ವಿವಿಧ ಸಾಂಸ್ಕೃತಿಕ. ಆರ್ಥಿಕ ಮತ್ತು ತಿಳುವಳಿಕೆಯ ಮಟ್ಟಗಳೇ ಕಾರಣ. ಇದನ್ನರಿತ ಕೆಲವು ಸಮಾಜಗಳು ಎಲ್ಲರ ಬದಲಾವಣೆಗೆ ಮತ್ತು ಬದಲಾವಣೆಯ ಮೇಲೆ ಒಂದು ಹತೋಟಿಯನ್ನಿಟ್ಟುಕೊಳ್ಳಲು, ಒಂದು ಯೋಜನೆ ತಯಾರಿಸಿ ಬದಲಾಣೆಯು ಎಷ್ಟಿರಬೇಕು ಮತ್ತು ಯಾವ ಗುಂಪಿನಲ್ಲಿ ಅಥವಾ ಸಂಗಡದಲ್ಲಿ ಇರಬೇಕು ಎಂಬುದನ್ನು ನಿರ್ಧರಿಸುತ್ತವೆ. ಇಂತಹ ಒಂದು ಯೋಜಿತ ಬದಲಾವಣೆಯನ್ನು ಭಾರತ ಮುಂತಾದ ಮುಂದುವರಿಯುತ್ತಿರುವ ದೇಶಗಳಲ್ಲಿ ನಡೆಯುತ್ತಿರುವ ರಾಷ್ಟ್ರಾಭಿವೃದ್ಧಿ ಕಾರ್ಯಕ್ಷೇತ್ರಗಳಿಂದ ಕಾಣಬಹುದು. ಈ ಕಾರ್ಯವು ಸರ್ವಸಾಮಾನ್ಯವಾದದ್ದು, ಅಂದರೆ ಸಮುದಾಯ

ದಲ್ಲಿನ ಅಥವಾ ಗ್ರಾಮದಲ್ಲಿನ ಎಲ್ಲರೂ ಎಲ್ಲ ರೀತಿಯಿಂದಲೂ ಅಭಿವೃದ್ಧಿ ಪರರಾಗಬೇಕು. ಈ ಒಂದು ಕಾರ್ಯದಲ್ಲಿ ಸರಕಾರಕ್ಕೆ ನೆರವಾಗಲು ಜನತೆಯನ್ನು ಸಂಘಟಿಸಲು ಮತ್ತು ಸಹಕರಿಸುವಂತೆ ಮಾಡಲು ಮಾನವಶಾಸ್ತ್ರದ ಬಳಕೆ ಅನಿವಾರ್ಯವಾಗುತ್ತದೆ.

ಸಂಪ್ರದಾಯಸ್ಥ ಜನರು ಅಭಿವೃದ್ಧಿಯಾಗಬೇಕಾದರೆ ಮೂರು ಮುಖ್ಯ ಅವಶ್ಯಕತೆಗಳಿವೆ. ತಮ್ಮ ಅವಶ್ಯಕತೆಗಳ ಅಥವಾ ತೊಂದರೆಗಳ ಅರಿವು, ಇವುಗಳನ್ನು ನಿವಾರಿಸಿಕೊಳ್ಳಲು ಒಟ್ಟುಗೂಡುವಿಕೆ ಮತ್ತು ಅಭಿವೃದ್ಧಿ ಕಾರ್ಯಾಚರಣೆ ಇವು ಮುಖ್ಯ. ಆದರೆ ಜನರಿಗೆ ತಮ್ಮ ತೊಂದರೆಗಳೇನು, ಅವುಗಳಿಗೆ ಕಾರಣಗಳೇನು, ಅವುಗಳನ್ನು ಹೇಗೆ ಪರಿಹರಿಸಿಕೊಳ್ಳಬೇಕು ಎಂಬ ವಿಚಾರ ಇರುವದಿಲ್ಲ, ಅಲ್ಲದೆ ತಮ್ಮ ಕಷ್ಟಗಳು ದೇವರು ಕೊಟ್ಟವು, ಇವನ್ನು ಮನುಷ್ಯರ ಪ್ರಯತ್ನದಿಂದ ನಿವಾರಿಸಲು ಸಾಧ್ಯವಿಲ್ಲ ಎಂಬುವ ಭಾವನೆ ಇರುತ್ತದೆ, ಇವನ್ನು ನಿವಾರಿಸಿ ತಮ್ಮ ಕಷ್ಟಗಳಿಗೆ ದೈವ ಕಾರಣವಲ್ಲ. ಸಮಾಜದಲ್ಲಿನ ಆರ್ಥಿಕ, ಸಾಮಾಜಿಕ ಮುಂತಾದ ಪ್ರಸಂಗಗಳು ಕಾರಣ ಎಂಬುದರ ಅರಿವನ್ನು ಮೂಡಿಸಿ, ಅನಂತರ ಜನರನ್ನು ಒಟ್ಟುಗೂಡಿಸಬೇಕಾಗುತ್ತದೆ. ಪ್ರತಿಯೊಂದು ಸಮಾಜದಲ್ಲಿಯೂ ಒಳಜಗಳಗಳು, ವೈರತ್ವ ಈರ್ಷೆ ಮುಂತಾದವು ತುಂಬಿರುತ್ತವೆ. ಅಲ್ಲದೆ ಒಬ್ಬರ ತೊಂದರೆ ಇನ್ನೊಬ್ಬರ ತೊಂದರೆ ಆಗಿರುವದಿಲ್ಲ. ಅನೇಕ ವೇಳೆ ಸಮಾಜದಲ್ಲಿರುವ ತೊಂದರೆಗಳೂ ಪ್ರತಿ ಕುಟುಂಬದ ತೊಂದರೆಗಳಾಗಿ ಇರುವದಿಲ್ಲ. ಇಂತಹ ಜನತೆಯನ್ನು ವಳೆಯ ಒಳಜಗಳಗಳನ್ನು ಮರೆತು ತಮ್ಮ ಸಮಾಜದ ಅಭಿವೃದ್ಧಿಗೆ ಶ್ರಮಿ

ಸಲು ಒಂದಾಗುವಂತೆ ಮಾಡುವುದು ಸಾಮಾನ್ಯ ವಿಷಯವಲ್ಲ. ಈ ಒಂದು ತೊಂದರೆಯನ್ನು ನಿವಾರಿಸಲು ಮಾನವಶಾಸ್ತ್ರಜ್ಞರು ವರ್ಷಗಳನ್ನೇ ಈ ಜನರ ಮಧ್ಯೆ ಕಳೆಯಬೇಕಾಗುತ್ತದೆ.

ಅಭಿವೃದ್ಧಿ ಕಾರ್ಯಕ್ಕೆ ಒಟ್ಟುಗೂಡಿದ ಜನರನ್ನು ಒಂದುಗೂಡಿಯೇ ಮುಂದುವರೆಯುವಂತೆ ಮಾಡಲು ಅವರನ್ನು ಯೋಜನೆಗಳಲ್ಲಿ ಸೇರಿಸಿಕೊಂಡು ಕೆಲಸಮಾಡುವಂತೆ ಪ್ರೇರೇಪಿಸಬೇಕು. ಜನತೆಯು ಭಾಗವಹಿಸದಿದ್ದರೆ ಯೋಜನೆಗಳು ಯಶಸ್ವಿಯಾಗಲಾರವು. ಅಲ್ಲದೆ ರಾಷ್ಟ್ರಾಭಿವೃದ್ಧಿಯಲ್ಲಿ ಅವರ ಪಾತ್ರವೂ ಇದೆ ಎಂಬುದನ್ನು ಅವರಿಗೆ ತೋರಿಸಿಕೊಡಲು ಅವರ ಸಲಹೆಗಳನ್ನು, ಬೇಕು–ಬೇಡಗಳನ್ನು ಅವರ ಕುಶಲತೆ, ಜ್ಞಾನ, ವಸ್ತುಗಳು ಮುಂತಾದವನ್ನು ಉಪಯೋಗಿಸಿಕೊಳ್ಳಬೇಕು. ಹೀಗಲ್ಲದೆ ಎಲ್ಲ ಸಲಕರಣೆಗಳನ್ನೂ ಹೊರಗಿನಿಂದ ತಂದು ಮಾಡಿದರೆ, ಈ ಅಭಿವೃದ್ಧಿ ಕಾರ್ಯವು "ಸರಕಾರದ ಕೆಲಸವೆಂದು" ಪರಿಗಣಿಸಿ ಜನರು ಸಹಕರಿಸುವುದಿಲ್ಲ. ಏನಾದರೂ ನ್ಯೂನತೆಗಳಿದ್ದರೆ ಅದು ತಮ್ಮ ತಪ್ಪು ಎಂಬುದನ್ನು ಮರೆತು ಸರಕಾರಿ ಅಧಿಕಾರಿಗಳ ಮೇಲೆ ತಪ್ಪು ಹೊರಿಸುತ್ತಾರೆ. ಈ ಕಾರ್ಯಗಳನ್ನೂ ಒಂದು ಯೋಜಿತ ರೀತಿಯಲ್ಲಿ ಮಾಡಲು ಮತ್ತು ಯೋಜನೆಗಳ ಮುಖ್ಯ ಗುರಿಗಳನ್ನು ಸಾಧಿಸಲು ಮಾನವಶಾಸ್ತ್ರದ ಜ್ಞಾನದ ಬಳಕೆ ಅತ್ಯವಶ್ಯಕವಾಗಿ ಬೇಕಾಗುತ್ತದೆ.

ಇಂದು ಗ್ರಾಮಾಡಳಿತಕ್ಕೆ ಹೊಸ ನಮೂನೆಯ ಆಡಳಿತ ಮಂಡಳಿಗಳನ್ನು ತರಲಾಗಿದೆ. ಇವುಗಳನ್ನು ಜಾರಿಗೆ ತಂದ ಉದ್ದೇಶದಂತೆ ವಿದ್ಯಾವಂತರು, ಸಾಂಪ್ರದಾಯಿಕ ಮನೋಭಾವನೆ

ಇಲ್ಲದವರು, ಅಧಿಕಾರಿಗಳಾಗಬೇಕಾಗುತ್ತದೆ. ಇವರನ್ನು ಆರಿಸಲು ಚುನಾವಣೆಗಳನ್ನು ತಂದರು. ಚುನಾವಣೆಯ ಫಲಿತಾಂಶವನ್ನು ಸರಸವಾಗಿ (sportive) ತೆಗೆದುಕೊಳ್ಳಲು ಕಲಿಯದ ಹಳೆಯ ಜನರು ಚುನಾವಣೆಯಲ್ಲಿ ಸ್ಪರ್ಧಿಸಲು ಮುಂದೆ ಬರದೇ ಅವರ ಕೈಗೊಂಬೆಗಳಾದ ಯುವಕರನ್ನು ಈ ಎಲ್ಲ ಸ್ಥಾನಗಳಿಗೂ ಚುನಾಯಿಸಿ ತಂದರು, ಚುನಾಯಿತರಾಗಿ ಬಂದವರೆಂದ ಮಾತ್ರಕ್ಕೆ ಇವರೇ ಗ್ರಾಮದ ಮುಖ್ಯಸ್ಥರು, ನಾಯಕರು ಎಂದು ತಿಳಿದರೆ ತಪ್ಪಾಗುತ್ತದೆ.* ಹೀಗೆ ತಪ್ಪು ತಿಳಿದ ಸರಕಾರಿ ಅಧಿಕಾರಿಗಳು ನಿಜವಾದ ಮುಖ್ಯಸ್ಥರನ್ನು ಬಿಟ್ಟು ಅವರ ಕೈಗೊಂಬೆಗಳನ್ನು ಹಿಡಿದುಕೊಂಡು ಕೆಲಸಮಾಡಲು ತೊಡಗಿದರೆ ಗುರಿ–ಸಾಧನೆಗೆ ತೊಂದರೆಯಾಗುತ್ತದೆ.

ಜನರ ಸಾಂಸ್ಕೃತಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು (Values) ತಿಳಿದುಕೊಳ್ಳುವುದೂ ಆವಶ್ಯಕ. ಮೌಲ್ಯಗಳು ಸಮಾಜದಿಂದ ಸಮಾಜಕ್ಕೆ, ಸಂಸ್ಕೃತಿಯಿಂದ ಸಂಸ್ಕೃತಿಗೆ ಮಾತ್ರ ವಲ್ಲದೆ ಒಂದೇ ಗುಂಪಿನ ವಿವಿಧ ಮಟ್ಟದ ಜನತೆಯಲ್ಲಿಯೂ ಬದಲಾಗುತ್ತವೆ. ಉದಾಹರಣೆಗೆ, ಹಿಂದುಗಳು ಒಂದೇ ಧರ್ಮ ದವರೆಂದು ಪರಿಗಣಿಸಲ್ಪಟ್ಟರೂ ಬೇರೆ ಬೇರೆ ಜಾತಿಗೆ ಸೇರಿದ ಅವರು ತಮ್ಮದೇ ಆದ ಸಂಸ್ಕೃತಿ ಮತ್ತು ಮೌಲ್ಯಗಳನ್ನು ಹೊಂದಿ ರುತ್ತಾರೆ. ಈ ಒಂದು ಕಾರಣದಿಂದ, ಒಂದು ಗುಂಪಿಗೆ ಬೇಕಾದ

* ಶ್ರೀ ಎಚ್.ಎಂ. ಮರುಳಸಿದ್ಧಯ್ಯನವರ ಪುಸ್ತಕ Old People of Makunti, Karnatak University Dharwad 1969 P.145 ನೋಡಿ.

ಶಾಲೆ, ಔಷಧಾಲಯ, ಊಟ-ಉಪಚಾರಗಳು ಹಾಗೂ ಬದಲಾವಣೆಗಳು ಇನ್ನೊಂದು ಗುಂಪಿಗೆ ಬೇಡವಾಗಬಹುದು. ಆದ್ದರಿಂದ ಬದಲಾವಣೆಯನ್ನು ತರಬೇಕೆನ್ನುವವರು ತಮ್ಮದೇ ಆದ ಪರಿಸರದ ಮೌಲ್ಯಗಳಿಂದ ಅಳೆದ ಸುಧಾರಣೆಗಳನ್ನು ಬದಲಾವಣೆಗಳನ್ನು ಮತ್ತು ವಸ್ತುಗಳನ್ನು ತಂದರೆ ಇವು ಈ ಜನರಿಗೆ ಬೇಡವಾಗಬಹುದು. ಅಲ್ಲದೆ ಜನತೆಗೆ ಮುಖ್ಯವಾಗಿ ಏನು ಬೇಕು, ಏನು ಬೇಡ ಎಂಬುದನ್ನು ಅವರೇ ನಿರ್ಧರಿಸಬೇಕು. ಇಲ್ಲದಿದ್ದರೆ ಇವರು ಯಾವುದೇ ಅಭಿವೃದ್ಧಿ ಕಾರ್ಯದಲ್ಲಿ ಸಹಕರಿಸದೇ ಇರಬಹುದು. ಉದಾಹರಣೆಗೆ, ಭಾರತದ ಹಳ್ಳಿಯೊಂದರಲ್ಲಿ ನಡೆದ ಒಂದು ಪ್ರಸಂಗವನ್ನು ತೆಗೆದುಕೊಳ್ಳಬಹುದು. ಅಭಿವೃದ್ಧಿ ಯೋಜನೆಯ ಅಧಿಕಾರಿಗಳು ಹಳ್ಳಿಯೊಂದಕ್ಕೆ ಹೋಗಿ ಗ್ರಾಮಸ್ಥರ ಸಭೆ ಕರೆದು, ಅವರ ಗ್ರಾಮಕ್ಕೆ ಅತ್ಯವಶ್ಯಕವಾಗಿ ಏನು ಬೇಕು ಎಂಬುದನ್ನು ಹೇಳಿದರೆ ತಾವು ಕೊಡಲು ಸಿದ್ಧರಾಗಿರುವುದಾಗಿ ಹೇಳಿದರಂತೆ. ಜನರಿಂದ ಬಂದ ಒಂದೇ ಬೇಡಿಕೆ ಎಂದರೆ ಅವರ ಗ್ರಾಮದೇವರ ದೇವಸ್ಥಾನದ ಜೀರ್ಣೋದ್ಧಾರ. ಈ ಬೇಡಿಕೆಯು ಅಧಿಕಾರಿಗಳಲ್ಲಿ ಆಶ್ಚರ್ಯವನ್ನು ತಂದಿತು. ಏಕೆಂದರೆ ಜನರಿಂದ ಅವರು ಒಂದು ಶಾಲೆಯನ್ನೋ, ಕುಡಿಯುವ ನೀರಿನ ಭಾವಿಯನ್ನೋ, ರಸ್ತೆಯನ್ನೋ ನಿರೀಕ್ಷಿಸಿದ್ದರು. ಆದರೆ ಇವು ಗ್ರಾಮಸ್ಥರಿಗೆ ಅವಶ್ಯಕವಾದವು ಎನಿಸಲಿಲ್ಲ. ಆದರೆ ಅಧಿಕಾರಿಗಳ ದೃಷ್ಟಿ ದೇವಸ್ಥಾನದ ಜೀರ್ಣೋದ್ಧಾರದ ಕೆಲಸವು ಅವಶ್ಯಕವಾದ ಬೇಡಿಕೆಯಾಗಲಿಲ್ಲ. ಆದುದರಿಂದ ಅವರು ಈ ಕೆಲಸಕ್ಕೆ ಸಹಾಯ ಮಾಡಲು ಬರುವುದಿಲ್ಲವೆಂದು ಉತ್ತರಿಸಿದರು. ಅನಂತರ ಊರಿನ ಜನರು "ತಮ್ಮ ಗ್ರಾಮದೇವರಿಗೊಂದು ದೇವಸ್ಥಾನ

ಕಟ್ಟಿಸಲಾರದ ಈ ಜನರಿಂದ ಯಾವ ಕೆಲಸವೂ ಆಗುವುದಿಲ್ಲ” ಎಂದು ಎದ್ದು ಹೋದರಂತೆ. ಮುಂದೆ ಈ ಅಧಿಕಾರಿಗಳು ಯಾವುದೇ ಅಭಿವೃದ್ಧಿ ಕಾರ್ಯಕ್ರಮ ತಂದರೂ ಜನರು ಅದರಲ್ಲಿ ಭಾಗವಹಿಸಲಿಲ್ಲ. ಹೀಗೆ ಜನರ ಮೌಲ್ಯಗಳನ್ನು ತಿಳಿಯದೇ, ಇಲ್ಲದ ಆಸೆಗಳನ್ನು ತೋರಿಸುವುದರಿಂದ ಅಭಿವೃದ್ಧಿ ಕಾರ್ಯಕ್ಕೆ ಅಡ್ಡಿಗಳೊದಗುತ್ತವೆ.

ಇಲ್ಲಿ ಜನತೆಗೆ ಶಾಲೆ, ರಸ್ತೆಗಿಂತ ದೇವಾಲಯವೇ ಏಕೆ ಅವಶ್ಯಕವೆಂದು ಕಂಡಿತೆಂಬುದನ್ನು ನಾವು ಅರ್ಥ ಮಾಡಿಕೊಂಡರೆ ಈ ಗ್ರಾಮಸ್ಥರು ಅಜ್ಞಾನಿಗಳಲ್ಲ, ಎಂಬುದು ತಿಳಿಯುತ್ತದೆ. ನಾವು ಯಾವುದಾದರೊಂದು ಗ್ರಾಮಕ್ಕೆ ಹೋಗಿ ಅಲ್ಲಿಯ ಜನರಲ್ಲಿ ತಮ್ಮ ಊರಿನ ದೇವಸ್ಥಾನದ ಬಗ್ಗೆ ಇರುವ ಗೌರವ, ಸ್ಥಾನ ಮುಂತಾದುವನ್ನು ನೋಡಿದರೆ ನಿಜಸ್ಥಿತಿ ತಿಳಿಯುತ್ತದೆ. ಅವರಿಗೆ ದೇವಸ್ಥಾನವು ದೇವರನ್ನಿಡುವ ಬರಿಯ ಒಂದು ಜಾಗ ಮಾತ್ರವಾಗಿರುವುದಿಲ್ಲ; ಈ ಜಾಗ ಊರ ಹೃದಯ; ಇಲ್ಲಿ ಗ್ರಾಮದ ನ್ಯಾಯ ಪಂಚಾಯಿತಿಗಳು ನಡೆಯುತ್ತವೆ. ಗ್ರಾಮದ ಎಲ್ಲಾ ಮುಖ್ಯ ಸಭೆಗಳು ನಡೆಯುವುದು ಇಲ್ಲಿಯೇ. ಗ್ರಾಮಕ್ಕೆ ಬಂದ ಅಧಿಕಾರಿಗಳು, ಪ್ರವಾಸಿಕರು, ಬೀಗರು ಮುಂತಾದವರು ತಂಗುವುದೂ ಇಲ್ಲಿಯೇ, ಅನೇಕ ವೇಳೆ ಗ್ರಾಮದ ಶಾಲೆಯೂ ನಡೆಯುತ್ತದೆ. ಈ ಎಲ್ಲಾ ಕಾರ್ಯಗಳಿಗೂ ಉಪಯೋಗಕ್ಕೆ ಬರುವ ದೇವಸ್ಥಾನವನ್ನು ಗ್ರಾಮಕ್ಕೆ ಕೇಳಿದ್ದು ಅಸಹಜವಲ್ಲ. ಆದರೆ ನಮ್ಮದು ಮತೀಯದೃಷ್ಟಿ ಇಲ್ಲದ, ರಾಜ್ಯವಾದ್ದರಿಂದ

(Secular) ಯಾವುದೇ ಒಂದು ಧರ್ಮಕ್ಕೆ ಸಂಬಂಧಪಟ್ಟ ದೇವಸ್ಥಾನದ ಕೆಲಸಕ್ಕೆ ಹಣ ಕೊಡಲು ಬರುವುದಿಲ್ಲ. ಆದರೆ ಜನತೆಯಲ್ಲಿನ ಈ ಭಾವನೆಯನ್ನು ಬದಲಾಯಿಸಲೂ ಬರುವುದಿಲ್ಲ. ಅನೇಕ ಸಂಶೋಧನೆಗಳನ್ನು ನಡೆಸಿ ಈ ಎಲ್ಲ ವಿಷಯಗಳನ್ನೂ ಗಮನಕ್ಕೆ ತೆಗೆದುಕೊಂಡ ನಮ್ಮ ಸರಕಾರದವರು ಈಗ ಪ್ರತಿ ಗ್ರಾಮದಲ್ಲೂ ಒಂದು 'ಭಜನಾ ಮಂದಿರ' ಕಟ್ಟಲು ಹಣ ಸಹಾಯ ನೀಡುತ್ತಿದ್ದಾರೆ. ಈ ಮಂದಿರವು ಗ್ರಾಮಸ್ಥರ ಎಲ್ಲಾ ಕಾರ್ಯ-ಕಲಾಪಗಳಿಗೆ ಅನುಕೂಲವಾಗಿರುವುದು. ಇದರಿಂದ ಗ್ರಾಮಸ್ಥರ ಸಹಕಾರವನ್ನು ಪಡೆದ ಅಧಿಕಾರಿಗಳು ಮುಂದೆ ಯಾವ ಕೆಲಸವನ್ನಾದರೂ ಯಶಸ್ವಿಯಾಗಿ ಕೈಕೊಳ್ಳಬಹುದು.

# ೭. ಔದ್ಯೋಗಿಕ ಕ್ಷೇತ್ರದಲ್ಲಿ ಮಾನವಶಾಸ್ತ್ರ

## (Anthropology In Industry)

ಸಮಾಜದ ಆಧುನೀಕರಣಕ್ಕೆ ಮತ್ತು ಆರ್ಥಿಕ ಸಂವರ್ಧನೆಗೆ ಔದ್ಯೋಗಿಕರಣವೇ ಆಧಾರ. 'ನಮ್ಮ ಸಮಾಜವನ್ನು ಔದ್ಯೋಗೀಕರಿಸಿ, ಇಲ್ಲವೆ ನಾಶ ಹೊಂದಿಸಿ" ಎಂದು ಮೈಸೂರಿನ ಪಿತಾಮಹ ಎಂ. ವಿಶ್ವೇಶ್ವರಯ್ಯನವರು ಹೇಳಿ, ರಾಜ್ಯವನ್ನು ಔದ್ಯೋಗೀಕರಣದತ್ತ ತಿರುಗಿಸಿ ಅದನ್ನು ನವೀಕರಿಸಿದುದನ್ನು ನಾವಿಲ್ಲಿ ನೆನೆಯಬಹುದು. ಇಂದು ಪ್ರಪಂಚದ ಯಾವ ಜನತೆಯು ಯಾಂತ್ರೀಕರಣದ ಜಾಲದಿಂದ ಹೊರಗುಳಿದಿಲ್ಲ. ಎಲ್ಲಾ ದೇಶಗಳೂ ಒಂದಲ್ಲ ಒಂದು ರೀತಿಯಲ್ಲಿ ಯಾಂತ್ರೀಕರಣದ ಉಪ-ಯೋಗವನ್ನು ಪಡೆದವುಗಳಾಗಿವೆ. ಉಪಯೋಗದ ಜೊತೆಗೆ ತೊಂದರೆಗಳನ್ನೂ ಅನುಭವಿಸುತ್ತಿರುವ ದೇಶಗಳೂ ಅನೇಕವಿವೆ. ಇದು ಕೆಲವು ದೇಶಗಳಿಗೆ ವರವಾಗಿದ್ದರೆ, ಹಿಂದುಳಿದ ಅಥವಾ ಸಂಪ್ರದಾಯಸ್ಥ ದೇಶಗಳಿಗೆ ಇದು ಶಾಪವಾಗಿ ಪರಿಣಮಿಸಿದೆ. ಯುರೋಪ್ ಖಂಡದ ಜನತೆ ತಮ್ಮ ಶತಮಾನಗಳ ಹೋರಾಟದಿಂದ ಯಾಂತ್ರಿಕ ಯುಗಕ್ಕೆ ಕಾಲಿರಿಸಿದ್ದರೆ, ಇಂದಿನ ಅನೇಕ ದೇಶಗಳು ಒಮ್ಮೆಗೆ "ಬೆರಣೆ ಯುಗ" ದಿಂದ ಯಾಂತ್ರಿಕ ಯುಗಕ್ಕೆ ಜಿಗಿದಿವೆ. ಈ ದೇಶಗಳಲ್ಲಿ ಸರ್ವಾನುಮುಖವಾದ ಬೆಳವಣಿಗೆ, ಅಭಿವೃದ್ಧಿ ಇಲ್ಲದಿರುವುದನ್ನು ಕಾಣಬಹುದು. ಅಲ್ಲದೇ ಈ ದೇಶಗಳಲ್ಲಿ ಕೆಲವು ಔದ್ಯೋಗೀಕರಣವನ್ನು ಬಯಸಿ ಪಡೆದ

ವಾದರೆ ಮತ್ತೆ ಕೆಲವು ಇದನ್ನು ಕಾಣಿಕೆಯಾಗಿಯೂ, ಕೆಲವು ರಾಜಕೀಯ ಒತ್ತಡಕ್ಕಾಗಿಯೂ ಪಡೆದಿವೆ. ಇವುಗಳಲ್ಲಿ ಕೆಲವು ತಮ್ಮ ಜನತೆಯ ಉದ್ಧಾರಕ್ಕೆ ಪಡೆದಿದ್ದರೆ ಮತ್ತೆ ಕೆಲವು ಗೌರವ ಕ್ಕೋಸ್ಕರ ಅಥವಾ ಅಭಿಮಾನಕ್ಕೆ ಪಡೆದಿವೆ. ಇದರ ಪರಿಣಾಮ ವಾಗಿ ಎಲ್ಲೆಲ್ಲೂ ಸಮಸ್ಯೆಗಳೂ, ಅತೃಪ್ತಿಯೂ ಉಲ್ಬಣಗೊಳ್ಳು ತ್ತಿವೆ.

ಔದ್ಯೋಗೀಕರಣದ ಕೆಟ್ಟ ಪರಿಣಾಮಗಳನ್ನು ನಾವು ಕೇವಲ ಕಾರಖಾನೆಗಳಿರುವ ನಗರಗಳಲ್ಲಿ ಮಾತ್ರವಲ್ಲದೆ ಇವುಗಳಿಗೆ ಕಚ್ಚಾ ವಸ್ತುಗಳನ್ನೊದಗಿಸುವ ಸ್ಥಳಗಳಾದ ಗಣಿಗಳಲ್ಲಿ, ಹೊಲ , ಗದ್ದೆ ಗಳಲ್ಲಿ ಮತ್ತು ಕಬ್ಬು, ಟೀ ಮುಂತಾದ ತೋಟಗಳಲ್ಲಿ ಕಾಣ ಬಹುದು. ಹಿಂದುಳಿದ ದೇಶದ ಜನರು ಸಂಪ್ರದಾಯಗಳ ಕಟ್ಟಳೆಗಳಲ್ಲಿ ಬೆಳೆದವರು. ಇಂತಹ ಸಂದರ್ಭದಲ್ಲಿ ತಮ್ಮ ಕಸಬುಗಳಾದ ವ್ಯವಸಾಯ, ಪಶುಪಾಲನೆ ಮುಂತಾದವುಗಳಲ್ಲಿ ನಿರತರಾಗಿರುವ ಇವರು ಯಾಂತ್ರಿಕತೆಗೆ ಹೊಂದಿಕೊಳ್ಳುವುದು ಕಷ್ಟವಾಗುತ್ತದೆ. ಉದಾಹರಣೆಗೆ, ಗಣಿ ಕೆಲಸಗಾರರು ವಿಶೇಷ ವಾಗಿ ಹಳ್ಳಿಗಳಿಂದ ಬಂದವರು. ತಮ್ಮೂರಲ್ಲಿ ಹೆಚ್ಚಿಗೆ ಗಳಿಸಲು ಅವಕಾಶಗಳಿಲ್ಲದೆ, ಒತ್ತೆಹಾಕಿದ ಹೊಲ–ಮನೆಗಳನ್ನು ಬಿಡಿಸಿ-ಕೊಳ್ಳಲು ಅಥವಾ ಸಾಲತೀರಿಸಲು, ಮದುವೆ ಮುಂತಾದ ಕಾರ್ಯಗಳಿಗೆ ಹಣ ಕೂಡಿಸಲು ತಮ್ಮ ಊರನ್ನು ಬಿಟ್ಟು ಬಂದಿ-ರುತ್ತಾರೆ. ಇವರಲ್ಲಿ ಬಹುಜನರು ಯುವಕರು, ದೃಢಕಾಯರು ಮತ್ತು ಬುದ್ಧಿವಂತರಿರುತ್ತಾರೆ. ಇಂತಹವರು ವಲಸೆ ಹೋಗು ವುದರಿಂದ ಇವರ ಮನೆಯಲ್ಲಿ ಮತ್ತು ಇವರು ಕೆಲಸ ಮಾಡಲು ಹೋಗುವ ಸ್ಥಳಗಳಲ್ಲಿ ಅನೇಕ ಸಮಸ್ಯೆಗಳು ಬರುತ್ತವೆ. ದುಡಿ-ಯುವ ಯುವಕರು ಮನೆಬಿಟ್ಟು ಹೋಗುವುದರಿಂದ ಇವರ

ವೃದ್ಧ ತಂದೆ–ತಾಯಂದಿರನ್ನು, ಚಿಕ್ಕ ವಯಸ್ಸಿನ ಸೋದರ ಸೋದರಿಯರನ್ನು ನೋಡಿಕೊಳ್ಳುವವರು ಯಾರೂ ಇರುವುದಿಲ್ಲ. ಮನೆತನದ ಖರ್ಚುನೀಗಿಸಲು ಇದ್ದವರೇ ತಮ್ಮ ಕಸಬನ್ನು ಮುಂದುವರೆಸಬೇಕಾಗುತ್ತದೆ. ಸರಿಯಾದ ಅನುಭವವಿಲ್ಲದವರು ಕೆಲಸ ಮಾಡುವುದರಿಂದ ಉತ್ಪನ್ನ ಕಡಿಮೆಯಾಗುತ್ತದೆ. ಕೆಲವು ವೇಳೆ ದುಡಿಯುವ ಯಜಮಾನನೇ ಮನೆಯಿಂದ ದೂರವಾಗಿದ್ದರೆ ಕುಟುಂಬದ ಸದಸ್ಯರ ಮೇಲೆ ನಿಯಂತ್ರಣ ಕಡಿಮೆಯಾಗಿ ಅಶಾಂತಿ ನೆಲೆಸುತ್ತದೆ. ನಿಯಂತ್ರಣ ತಪ್ಪಿದ ಮಕ್ಕಳು ಅಲೆಮಾರಿಗಳಾಗಬಹುದು. ಇಲ್ಲವೆ ಹೆಂಡತಿ ಅಥವಾ ಬೆಳೆದ ಮಗಳಿದ್ದರೆ ಅವರು ಅನೈತಿಕ ವ್ಯವಹಾರಕ್ಕಿಳಿಯಬಹುದು.

ಕೆಲಸಮಾಡುವ ಸ್ಥಳಗಳಲ್ಲಿಯೂ ಅನೇಕ ತೊಂದರೆಗಳು ಬರುತ್ತವೆ. ಮನೆಯಿಂದ ಹೊರಗೆ ಬಂದು ಹೊಸ ಜಾಗೆ, ಹೊಸ ನಮೂನೆಯ ಕೆಲಸ, ಹೊಸ ವಾತಾವರಣಕ್ಕೆ ಹೊಂದಿಕೊಳ್ಳುವುದು ತೊಂದರೆಯಾಗುತ್ತದೆ. ಇಲ್ಲಿ ಸರಿಯಾದ ಊಟ–ವಸತಿಗಳಿಲ್ಲದೆ ಅನೇಕರು ರೋಗಿಗಳಾಗಿ ಏನನ್ನೂ ಗಳಿಸದೆ ಹಿಂತಿರುಗುತ್ತಾರೆ. ಮತ್ತೆ ಕೆಲವರು ಕುಟುಂಬದ ಯಜಮಾನನ ನಿಯಂತ್ರಣದಿಂದ ದೂರವಿರುವುದರಿಂದ ತಾವು ಗಳಿಸಿದ ಹಣವನ್ನು ಸ್ವೇಚ್ಛೆಯಾಗಿ ಖರ್ಚುಮಾಡಿ ಬಿಡುತ್ತಾರೆ. ಕೆಲವರು ಕೆಟ್ಟಸಹವಾಸಕ್ಕೆ ಬಿದ್ದು ದುರ್ಮಾರ್ಗಿಗಳಾಗಿ ಬಿಡುತ್ತಾರೆ. ಮುಂದೆ ತಮ್ಮ ಕೆಲಸವನ್ನು ಕಳೆದುಕೊಂಡು ಹುಟ್ಟಿದೂರಿಗೆ ಹೋಗಲು ನಾಚಿಕೆಯಾಗಿ ತಮ್ಮ ಜನರಿಂದ ಪೂರ್ಣವಾಗಿ ತಮ್ಮ ಸಂಬಂಧಗಳನ್ನು ಕಡಿದುಕೊಂಡುಬಿಡುತ್ತಾರೆ.

ಅಲ್ಲದೆ ಒಂದೇ ಮಾರ್ಗದ ಅಥವಾ ಏಕಮುಖದ ವಲಸೆಯು ಹಳ್ಳಿಗಾಡಿನಲ್ಲಿನ ವಯೋ ಗುಂಪುಗಳಲ್ಲಿ ವ್ಯತ್ಯಾಸವನ್ನು ತರುತ್ತದೆ. ಜಪಾನಿನಲ್ಲಿ ಸಂಭವಿಸಿದ ಪರಿಸ್ಥಿತಿಯಂತೆ ಯುವಕರನ್ನರಸುತ್ತಾ ಯುವತಿಯರೂ ನಗರಗಳಿಗೆ ಬಂದುಬಿಡುತ್ತಾರೆ. ಮುಗ್ಧಸ್ವಭಾವದ ಹಳ್ಳಿಯ ಯುವತಿಯರು ನಗರದ ನವನಾಗರಿಕತೆಯ ಜಾಲದಲ್ಲಿ ಸಿಕ್ಕಿ ತಮಗರಿವಿಲ್ಲದಂತೆಯೇ ದುರ್ಮಾರ್ಗಿಗಳಾಗಿ ಕೊನೆಗೆ ವೇಶ್ಯಾವೃತ್ತಿಯಲ್ಲೋ ಅಥವಾ ಮತ್ತಾವುದಾದರೂ ಕೆಳಮಟ್ಟದ ವೃತ್ತಿಗಳಲ್ಲೋ ತೊಡಗಿಬಿಡುವುದರಿಂದ ಅನೇಕ ಸಮಸ್ಯೆಗಳು ಉದ್ಭವಿಸುತ್ತವೆ.

ಔದ್ಯೋಗೀಕರಣವು ತಂದ ಸಮಸ್ಯೆಗಳಲ್ಲಿ ನಿರುದ್ಯೋಗಿಗಳ ಸಂಖ್ಯೆಯಲ್ಲಿ ಹೆಚ್ಚಳವೂ ಒಂದು. ಹೊಸಹೊಸ ಬಗೆಯ, ಮಿತವಾದ ಮಾನವಶಕ್ತಿಯ ಆವಶ್ಯಕತೆ ಇರುವ, ಯಂತ್ರಗಳ ಬಳಕೆಯಿಂದಾಗಿ ಕೆಲಸದ ವೇಳೆಯಲ್ಲಿ ಕಡಿತವಾಗಿ ಮಾನವನಿಗೆ ವಿಶ್ರಾಂತಿ ದೊರೆತಿದೆಯಾದರೂ. ಯಾಂತ್ರೀಕರಣವು ತಂದ ಸಮಸ್ಯೆಗಳು ಅನೇಕ. ಅನೇಕರು ತಮ್ಮ ಜೀವನಾಧಾರವಾದ ನೇಯುವುದು, ಬಡಿಗತನ. ಎಣ್ಣೆ ತೆಗೆಯುವುದು, ಪಾತ್ರೆಮಾಡುವುದು ಮುಂತಾದವುಗಳನ್ನು ಕಳೆದುಕೊಂಡರು, ತಮ್ಮ ಕುಶಲತೆಯಿಂದ ತಯಾರಿಸಿದ ವಸ್ತುಗಳು ಯಂತ್ರದಲ್ಲಿ ಮಾಡಿದ ವಸ್ತುಗಳ ನವೀನತೆ, ಕುಶಲತೆಯ ಮುಂದೆ ನಿಲ್ಲದಾದವು. ಮುಂದೆ ಇವರಿಗೆ ಯಾವ ನೌಕರಿಯೂ ಸಿಗದೆ ನಿರುದ್ಯೋಗಿಗಳಾದರು. ಹೀಗೆ ಜೀವನದ ಪ್ರತಿಯೊಂದು ಕಡೆಯಲ್ಲೂ ಯಂತ್ರದ ಬಳಕೆ ಹೆಚ್ಚಿದಂತೆ ದಿನೇ ದಿನೇ ನಿರುದ್ಯೋಗಿಗಳ ಸಂಖ್ಯೆಯೂ ಹೆಚ್ಚುತ್ತದೆ. ಆಯಾ ಸರಕಾರಗಳು ತಮ್ಮ ಯಾಂತ್ರೀಕರಣದ ಯೋಜನೆಗಳ ಜೊತೆಗೆ

ಆದರಿಂದ ತೊಂದರೆಗೊಳಗಾದವರ ಕಲ್ಯಾಣದ ಬಗ್ಗೆಯೂ ಸರಿಯಾದ ಯೋಜನೆಯನ್ನಿಟ್ಟು ಕೊಳ್ಳಬೇಕು. ಇಂತಹ ಸಂದರ್ಭದಲ್ಲಿ ಮಾನವಶಾಸ್ತ್ರದ ಜ್ಞಾನ ಉಪಯೋಗಕ್ಕೆ ಬರುತ್ತದೆ.

ತೀರಾ ಇತ್ತೀಚೆಗೆ ಕಂಡುಕೊಂಡ ಮಾನವಶಾಸ್ತ್ರದ ಮತ್ತೊಂದು ಉಪಯೋಗವೆಂದರೆ ಕಾರ್ಖಾನೆಗಳಲ್ಲಿನ ಕೂಲಿ-ಕಾರರ ಸ್ಥಿತಿಗಳು, ಅವರಲ್ಲಿನ ಸಂಬಂಧಗಳು ಮುಂತಾದವುಗಳನ್ನು ಅಭ್ಯಾಸಮಾಡಿ ಕಾರ್ಖಾನೆಯ ಉತ್ಪನ್ನವನ್ನು ಹೆಚ್ಚಿಸುವುದು. ಮಾನವಶಾಸ್ತ್ರದ ಬಳಕೆಗಿಂತ ಮೊದಲಿಗೆ ಉತ್ಪನ್ನವನ್ನು ಹೆಚ್ಚಿಸಲು ಕೈಗೊಂಡಿದ್ದ ಕ್ರಮಗಳೆಂದರೆ ಬಾಹ್ಯವಾತಾವರಣದಲ್ಲಿ (Physical Working Conditions) ಹೆಚ್ಚು ಹೆಚ್ಚು ಸೌಕ-ರ್ಯಗಳನ್ನು ಕಲ್ಪಿಸಿಕೊಡುವುದಿತ್ತು. ಮಾನವಶಾಸ್ತ್ರಜ್ಞರು ಅಭ್ಯಾಸಮಾಡಿದ ನಂತರ ಬಾಹ್ಯವಾತಾವರಣಕ್ಕಿಂತಲೂ ಆಂತ-ರಿಕ ಸೌಕರ್ಯಗಳು ಹೆಚ್ಚು ಪ್ರಯೋಜನಕಾರಿ ಎಂದು ತಿಳಿದು ಬಂದಿತು. ಕೂಲಿಕಾರನಿಗೆ ಕೆಲಸದ ವೇಳೆಯಲ್ಲಿ ಸರಿಯಾದ ವಾತಾವರಣ ನೀಡಿದರೆ ಅವನು ಪ್ರಸನ್ನ ಮನಸ್ಕನಾಗಿ ಹೆಚ್ಚು ಕೆಲಸಮಾಡಿ ಉತ್ಪನ್ನವನ್ನು ಹೆಚ್ಚಿಸುವನೆಂದು ಅವನ ಕಲ್ಯಾಣಾ-ಧಿಕಾರಿಗಳು ತಿಳಿದಿದ್ದರು. ಅಂದರೆ ಅವರಿಗೆ ಕೂಲಿಕಾರನೇ ಮುಖ್ಯವಾಗಿದ್ದ. ಅವನು ಕಾರ್ಖಾನೆಯಲ್ಲಿ ಇರುವಷ್ಟು ವೇಳೆ ಅವನನ್ನು ಸರಿಯಾಗಿ ನೋಡಿಕೊಂಡು ಅವನಿಂದ ಕೆಲಸತೆಗೆದುಕೊಂಡರು. ಆದರೂ ಕಾರ್ಖಾನೆಗಳಲ್ಲಿ ಆಲಸ್ಯತನ, ಅಜಾಗ-ರೂಕತೆ, ಅಂತರ್ಮುಖಿಗಳಾಗುವುದು ಇವುಗಳಿಂದ ಆಗಾಗ ಅಪ-ಘಾತಗಳಾಗುತ್ತಿದ್ದವು. ಹೆಚ್ಚಿನ ಸಂಖ್ಯೆಯಲ್ಲಿ ಕೂಲಿಕಾರರು ಕೆಲಸಬಿಟ್ಟು ಹೋಗುವುದೂ ಇದ್ದಿತು. ಮಾನವಶಾಸ್ತ್ರಜ್ಞರು

ಈ ಒಂದು ವಿಷಯವನ್ನು ತೆಗೆದುಕೊಂಡು ಅಭ್ಯಾಸಮಾಡಿದಾಗ, ಕಾರ್ಮಿಕನಲ್ಲಿನ ಸಹಜಗುಣಗಳಾದ ಕುಟುಂಬದವರ ಬಗ್ಗೆ ಚಿಂತೆ, ತನ್ನ ಸಹಕಾರ್ಮಿಕರೊಡನೆ ಅವನ ಸಂಬಂಧಗಳು, ಭಾವನೆಗಳು ಮುಖ್ಯವೆಂದು ಕಂಡು ಬಂದಿತು. ಇದರಿಂದ ತಿಳಿದುಬಂದ ವಿಶೇಷ ಸಂಗತಿಗಳೆಂದರೆ ಬರೀ ಕಾರ್ಮಿಕ ಕಲ್ಯಾಣಕ್ಕೆ ಶ್ರಮಿಸಿದರೆ ಸಾಲದು, ಅವನ ಕುಟುಂಬದವರಿಗೂ ವೈದ್ಯಕೀಯ, ವಿದ್ಯೆ, ಸಾರಿಗೆ, ಮನರಂಜನೆ ಮುಂತಾದ ಸೌಕರ್ಯಗಳನ್ನು ಒದಗಿಸುವುದೂ ಮುಖ್ಯ; ಇದರಿಂದ ಅವನನ್ನು ಅನೇಕ ಹೊಣೆಗಳಿಂದ ಮುಕ್ತನನ್ನಾಗಿ ಮಾಡಿದಂತಾಗುತ್ತದೆ. ಅಂದರೆ, ಅವನ ಮತ್ತು ಅವನ ಕುಟುಂಬದವರ ಸಲುವಾಗಿ ಕಲ್ಯಾಣಕಾರ್ಯಗಳನ್ನು ವ್ಯವಸ್ಥೆಗೊಳಿಸಿದರೆ ಅವನು ಪ್ರಸನ್ನನಾಗಿ ಹೊರಗಿನ ತೊಂದರೆಗಳನ್ನು ಮರೆತು ನಿಶ್ಚಿಂತನಾಗಿ ದುಡಿಯಬಲ್ಲನು. ಇಲ್ಲದಿದ್ದರೆ ಅವನು ಕೆಲಸಕ್ಕೆ ಬಂದಿದ್ದರೂ ಅವನ ಮನಲಸ್ಸೆಲ್ಲಾ ತನ್ನ ರೋಗಸ್ಥ ಮಗುವಿನ ಮೇಲಿರಬಹುದು. ಅನ್ಯಮನಸ್ಕನಾದ ಇವನು ಅಪಘಾತಕ್ಕೊಳಗಾಗಿ ರಜೆ ಬೇಡುತ್ತಾನೆ. ಅಥವಾ ತನ್ನ ಮಕ್ಕಳನ್ನು ಸ್ಕೂಲ್‌ಗೆ ಬಿಡಲು ಅಥವಾ ಮನೆಯವರಿಗೆ ಮನರಂಜನೆ ನೀಡಲು ಕರೆದುಕೊಂಡು ಹೋಗಲು ಅವನ ಕಾಲವಿನಿಯೋಗವಾಗಬಹುದು. ಅನೇಕ ವೇಳೆ ಸ್ವಲ್ಪ ತಡವಾದ ಕಾರಣದಿಂದ ಇಡೀ ದಿನಕ್ಕೆ ರಜೆ ಪಡೆಯಬೇಕಾಗಬಹುದು. ಸೂಕ್ತ ತರಬೇತಿಪೊಂದಿದ ಅನುಭವಸ್ಥ ಕೂಲಿಕಾರನೊಬ್ಬನು ಹೀಗೆ ಸಣ್ಣ ಸಣ್ಣ ಕಾರಣಕ್ಕಾಗಿ ಪದೇ ಪದೇ ರಜೆ ತೆಗೆದುಕೊಳ್ಳುವುದರಿಂದಲೂ ಉತ್ಪನ್ನ ಕಡಿಮೆಯಾಗುತ್ತದೆ. ಈ ಕಾರಣಗಳಿಂದ ಕಾರ್ಖಾನೆಯ ಆಡಳಿತವರ್ಗದವರು ಈ

ಎಲ್ಲಾ ಹೊಣೆಗಳಿಂದಲೂ ಮುಕ್ತನನ್ನಾಗಿ ಮಾಡಿದರೆ ಅವನ್ನು ಮನಸ್ಸುಕೊಟ್ಟು ಕೆಲಸ ಮಾಡಬಲ್ಲನು.

ಪ್ರತಿಯೊಂದು ಮಾನವ ಸಮುದಾಯದಲ್ಲಿಯೂ ಒಳ-ಗುಂಪುಗಳಿರುತ್ತವೆ. ಇವು ಮುಖ್ಯವಾಗಿ ವ್ಯಕ್ತಿಗಳ ನಡುವಿರುವ ಸಿಹಿಸಂಬಂಧ ಒಂದೇ ತರಹದ ಗುಣಗಳು, ಚಟುಗಳು, ಮುಂತಾದವುಗಳ ಕಾರಣದಿಂದ ಅಸ್ತಿತ್ವಕ್ಕೆ ಬಂದಿರುತ್ತವೆ. ಇದರಂತೆ ಅಂತಹ ವ್ಯಕ್ತಿಗಳು ತಮ್ಮದೇ ಆದ ಒಂದು ಒಳಗುಂಪನ್ನು ಮಾಡಿಕೊಂಡಿರುತ್ತಾರೆ. ಇಂತಹ ಒಂದು ಗುಂಪಿನ ಸದಸ್ಯರನ್ನು ಒಂದೇ ಕಡೆ ಕೆಲಸಕ್ಕೆ ಹಚ್ಚಿದರೆ ಅವರಿಗೆ ಕೆಲಸದ ಬಳಲಿಕೆಯೇ ತಿಳಿಯುವುದಿಲ್ಲ. ಅವರು ಯಾವಾಗಲೂ ಪ್ರಸನ್ನ-ರಾಗಿದ್ದುಕೊಂಡು ತಮ್ಮ ಕೆಲಸದಲ್ಲಿಯೂ ಸುಖಸಂತೋಷಗಳನ್ನು ಕಾಣುತ್ತಾರೆ. ಇಂತಹ ಗುಂಪುಗಳು ಇರುವುದನ್ನು ನಾವು ಬೇರೆ ಬೇರೆ ಕಡೆ ಬೇರ ಬೇರೆ ಮನೋವೃತ್ತಿಯವರ ಜೊತೆಗೆ ಕೆಲಸಕ್ಕೆ ಹಚ್ಚಿದರೆ ಅವರಿಗೆ ಇಲ್ಲದ ಬೇಸರ ಬರುತ್ತದೆ. ಸ್ವಲ್ಪ ಕೆಲಸ ಮಾಡಿದರೆ ಸಾಕು ದಣಿವಾದಂತಾಗಿ ಅವರು ನಿರುತ್ಸಾಹಿಗಳಾಗುತ್ತಾರೆ. ಇಲ್ಲಿಯೂ ಮಾನವಶಾಸ್ತ್ರದ ಜ್ಞಾನ-ವನ್ನು ಉಪಯೋಗಿಸಿಕೊಂಡು ಗುಂಪುಗಳ ಇರವು, ಅವುಗಳ ರಚನೆ, ಅವುಗಳ ಮೂಲಗಳು ಮುಂತಾದವುಗಳನ್ನು ಶೋಧಿಸಿ ಅವರಿಂದ ಸರಿಯಾದ ಉಪಯೋಗ ಪಡೆಯಬಹುದು. ಹೀಗೆ ಮಾನವಶಾಸ್ತ್ರದ ಜ್ಞಾನವನ್ನು ಔದ್ಯೋಗೀಕರಣವು ತಂದ ಸಮಸ್ಯೆಗಳನ್ನು ನಿವಾರಿಸುವಲ್ಲಿಯೂ ಕಾರಖಾನೆಗಳಲ್ಲಿ ಉತ್ಪನ್ನ ಹೆಚ್ಚಿಸುವಲ್ಲಿಯೂ ಉಪಯೋಗಿಸಬಹುದು.

# ೮. ಉಪಸಂಹಾರ ಮತ್ತು ನಿಶ್ಚಿತ ಸಿದ್ಧಾಂತಗಳು

ಸಮಾಜವಿಜ್ಞಾನಗಳಲ್ಲಿ ಮಾನವಶಾಸ್ತ್ರ ತೀರಾ ಹೊಸದಾದರೂ ಮಾನವನ ಸೇವೆಯಲ್ಲಿ ಇದರಷ್ಟು ಯಾವ ಶಾಸ್ತ್ರವೂ ದುಡಿದಿಲ್ಲವೆನ್ನಬಹುದು. ಇದಕ್ಕೆ ಕಾರಣ ಮಾನವಶಾಸ್ತ್ರದ ಅಭ್ಯಾಸದ ವಿಷಯ ಮಾನವನೇ ಆಗಿರುವುದು. ಎಲ್ಲಾ ಸಮಾಜ ವಿಜ್ಞಾನಗಳು ಮಾನವನ ವಿವಿಧ ಚಟುವಟಿಕೆಗಳನ್ನು ಅಭ್ಯಾಸ ಮಾಡಿದರೆ ಮಾನವಶಾಸ್ತ್ರವು ಮಾನವನನ್ನೇ ಅಭ್ಯಾಸ ಮಾಡುತ್ತದೆ. ವಸಾಹತುಗಳ ಆಳ್ವಿಕೆಯ ಕಾಲದಲ್ಲಿ ಮಾನವಶಾಸ್ತ್ರವು ಜ್ಞಾನದ ವ್ಯಾವಹಾರಿಕ ಬಳಕೆ ಮೊದಲಾಯಿತು. ವಸಾಹತುಗಳು ಹೋದ ನಂತರ ಸ್ವತಂತ್ರವಾದ ರಾಷ್ಟ್ರಗಳು ತಮ್ಮ ಜನತೆಯ ಆಡಳಿತದಲ್ಲಿಯೂ ಮಾನವಶಾಸ್ತ್ರದ ಜ್ಞಾನವನ್ನು ಉಪಯೋಗಿಸುತ್ತಾ ಬಂದಿವೆ.

ಮಾನವಶಾಸ್ತ್ರಜ್ಞರು ಮುಖ್ಯವಾಗಿ ಮಾನವನ ಸಂಸ್ಕೃತಿ, ನಡವಳಿಕೆ, ಸಂಬಂಧಗಳನ್ನು ಅಭ್ಯಾಸ ಮಾಡುವುದರಿಂದ ಅವನ ಬಗ್ಗೆ ಇವರಿಗೆ ತಿಳಿದಷ್ಟು ಮತ್ತಾರಿಗೂ ತಿಳಿದಿರುವುದಿಲ್ಲ. ಆದ್ದರಿಂದ ತೀವ್ರಗತಿಯಲ್ಲಿ ಬದಲಾಗುತ್ತಿರುವ ಇಂದಿನ ಸಮಾಜದಲ್ಲಿ ಮಾನವನ ಬಾಳನ್ನು ಸುಖಮಯ ಮಾಡಲು ಮಾನವಶಾಸ್ತ್ರದ ನೆರವು ಅಗತ್ಯವಾಗುತ್ತದೆ. ಅವನಷ್ಟಕ್ಕೆ ಮಾನವನನ್ನು ಬಿಟ್ಟರೆ ಅವನು ತನ್ನದೇ ಆದ ರೀತಿಯಲ್ಲಿ ವಾತಾವರಣವನ್ನು ನಿರ್ಮಿಸಿಕೊಂಡು ಸುಖವಾಗಿರುತ್ತಾನೆ. ಎನ್ನುವುದು ಸರಿ

ಯಾದದ್ದೇ. ಆದರೆ ಅವನನ್ನು ಹಾಗೆ ಬಿಡದೆ ಹೊರಗಿನಿಂದ ಬಂದ ಅನೇಕ ವಿಷಯಗಳು ಅವನ ಜೀವನವನ್ನು ದುಃಖಮಯ ವನ್ನಾಗಿ ಮಾಡುತ್ತವೆ. ಇಂತಹ ಒಂದು ಸನ್ನಿವೇಶದಲ್ಲಿ ಸರ-ಕಾರವು ಅವನ ಬಾಳನ್ನು ಸುಗಮಮಾಡಲು ಶ್ರಮಿಸಬೇಕಾಗು ತ್ತದೆ. ಅದೂ ಅಲ್ಲದೆ ಇಂದಿನ ಪ್ರಪಂಚದ ಪರಿಸ್ಥಿತಿಯಲ್ಲಿ ಯಾವ ಸಮಾಜವೂ ಅನ್ಯ ಸಮಾಜದಿಂದ ದೂರವಾಗಿರಲು ಸಾಧ್ಯವಿಲ್ಲ. ಅನೇಕ ವೇಳೆ ರಾಷ್ಟ್ರದ ಹಿತ ದೃಷ್ಟಿಯಿಂದಲೂ ಸರಕಾರಗಳೇ ಈ ಸಮಾಜಗಳನ್ನು ಹೊರಗಿನ ಸಮಾಜದತ್ತ ಎಳೆದು ತರುತ್ತವೆ. ಇಂತಹ ಒಂದು ಉದ್ದೇಶಪೂರ್ವಕವಾದ ಬದಲಾವಣೆಯು ಯೋಜನಾ ರೀತಿಯಲ್ಲಿ ಮತ್ತು ಕ್ರಮ ಕ್ರಮ ವಾಗಿ ಬರಬೇಕು.

ಹೀಗೆಂದಾಕ್ಷಣ ಮಾನವಶಾಸ್ತ್ರಜ್ಞರು ಬದಲಾವಣೆಯ ವಿರೋಧಿಗಳೆಂದಲ್ಲ. ನಾವು ಬದಲಾವಣೆ ಎಂಬ ಗಡಿಯಾರ ವನ್ನು ನಿಲ್ಲಿಸಲಾರೆವು. ನಿಜ, ಆದರೆ ಈ ಒಂದು ಗಡಿಯಾರವು ಸರಿ ಯಾದ ಕಾಲವನ್ನು ತೋರಿಸದೆ ತಪ್ಪು ಕಾಲವನ್ನು ತೋರಿಸಿದರೆ ಅದನ್ನು ನಾವು ಸರಿಪಡಿಸಬೇಕಾಗುತ್ತದೆ. ಇಲ್ಲದಿದ್ದರೆ ಜನತೆ ಯಲ್ಲಿನ ಅನೇಕ ನ್ಯೂನತೆಗಳನ್ನು ನಿವಾರಿಸಲು ಹೋಗಿ ಹೊಸ ಹೊಸ ತೊಡಕುಗಳನ್ನು ತಂದಂತಾಗುತ್ತದೆ. ಈ ಒಂದು ಭಾವನೆ ಯನ್ನಿಟ್ಟುಕೊಂಡು ನಮ್ಮ ಅಭಿವೃದ್ಧಿ ಮತ್ತಿತರ ಕಾರ್ಯಕ್ರಮ ಗಳನ್ನು ಜಾರಿಗೆ ತಂದರೆ ಯಾವ ತೊಂದರೆಯೂ ಬರುವುದಿಲ್ಲ. ಈ ಒಂದು ಭಾವನೆಯನ್ನು ಜನತೆಯಲ್ಲಿ, ಅಧಿಕಾರಿಗಳಲ್ಲಿ ಮತ್ತು ಸಮಾಜಕಾರ್ಯಕರ್ತರಲ್ಲಿ ತರಲು ಮಾನವಶಾಸ್ತ್ರದ ಜ್ಞಾನ

ಅನಿವಾರ್ಯವಾಗುತ್ತದೆ. ಇಂತಹ ಒಂದು ಸನ್ನಿವೇಶದಲ್ಲಿ ಮಾನವಶಾಸ್ತ್ರಜ್ಞನು ತನ್ನ ಅಪಾರ ಜ್ಞಾನವನ್ನು ವ್ಯಾವಹಾರಿಕ ರೀತಿಯಲ್ಲಿ ವಿನಿಯೋಗಿಸಲು ಸದಾಸಿದ್ಧನಿರುತ್ತಾನೆ. ಮಾನವನ ಅಭ್ಯಾಸದಿಂದ ಗಳಿಸಿದ ಜ್ಞಾನವನ್ನು ಮಾನವನ ಸೇವೆಗೇ ಉಪ-ಯೋಗಿಸುವುದರಿಂದ ಮಾನವಶಾಸ್ತ್ರದ ಉದ್ದೇಶಗಳು ಫಲವಾಗುತ್ತವೆ. ಆದುದರಿಂದಲೇ ಮಾನವಶಾಸ್ತ್ರದ ಅನೇಕ ಶಾಖೆಗಳು ಮತ್ತು ಉಪಶಾಖೆಗಳು ಮಾನವನ ಅನೇಕ ತೊಂದರೆಗಳನ್ನು ನಿವಾರಣೆ ಮಾಡುವಲ್ಲಿ ನೆರವಾಗುತ್ತವೆ. ಇಷ್ಟೇ ಅಲ್ಲದೆ ವ್ಯಾಸಂಗಗಳಲ್ಲಿ ಒದಗುವ ಅನೇಕ ತೊಡಕಿನ ಸನ್ನಿವೇಶಗಳನ್ನು ನಿವಾರಣೆ ಮಾಡುವಲ್ಲಿಯೂ ಮಾನವಶಾಸ್ತ್ರವನ್ನು ಬಳಸಲಾಗುತ್ತದೆ. ಇವುಗಳಲ್ಲಿ ಭಾಷಾಶಾಸ್ತ್ರ ಮತ್ತು ಪ್ರಾಚೀನವಸ್ತುಶಾಸ್ತ್ರಗಳು ಮುಖ್ಯವಾದವು. ಉದಾಹರಣೆಗೆ, ಭಾಷಾಶಾಸ್ತ್ರವು ಲಿಪಿ ಇದ್ದ ಭಾಷೆಗಳನ್ನಲ್ಲದೆ ಲಿಪಿ ಇಲ್ಲದ ಅಥವಾ ಲಿಪಿಯನ್ನು ಕಳೆದುಕೊಂಡ ಭಾಷೆಗಳಿಗೆ ಆಯಾ ಸಮಾಜ–ಸಂಸ್ಕೃತಿಗಳನು ಅಭ್ಯಾಸಮಾಡಿ ಅವರಿಗೆ ತಕ್ಕ ಲಿಪಿಯನ್ನು ಒದಗಿಸಬಲ್ಲದು. ಇದರಂತೆ ಅನೇಕ ಆದಿವಾಸಿ ಸಮಾಜಗಳಿಗೆ ಅವರ ಭಾಷೆಗಳಿಗೆ ಅನುಗುಣವಾದ ಲಿಪಿಯನ್ನೊದಗಿಸಲಾಗಿದೆ.

ಅನೇಕ ಸಮಾಜಗಳು ಹಿಂದೆ ತಮ್ಮದೇ ಆದ ಲಿಪಿಯನ್ನು ಹೊಂದಿದ್ದು ಅನೇಕ ಕಾರಣಗಳಿಂದ ಅದನ್ನು ಕಳೆದುಕೊಂಡಿದ್ದವು. ಇಲ್ಲಿ ಫಿಲಿಪೀನ್ಸ್‌ನ "ಇಂಡಿಕ್" ಮತ್ತು ಯಹೂದಿ ಜನರ (Jews) "ಹೀಬ್ರೂ" ಲಿಪಿಗಳನ್ನು ಮುಖ್ಯವಾಗಿ ಉದಾಹರಣೆ-ಗಾಗಿ ತೆಗೆದುಕೊಳ್ಳಬಹುದು. ಸ್ಪೇನ್‌ದೇಶದ ವಸಾಹತು-

ವಾಗಿದ್ದಾಗ ಫಿಲಿಪೀನ್ಸ್, ಇಂಡಿಕ್ ಲಿಪಿಯನ್ನು 'ಪಿಶಾಚಿಗಳ' ಲಿಪಿ ಎಂದು ಆಳರಸರು ಕಡೆಗಣಿಸಿ ಹಾಳುಮಾಡಿ ಸ್ಪಾನಿಷ್ ಭಾಷೆಯನ್ನು ಬಲವಂತವಾಗಿ ಜಾರಿಗೆ ತಂದರು. ಇದೇ ರೀತಿ ತಮ್ಮ ಹುಟ್ಟು ನೆಲವನ್ನು ಬಿಟ್ಟು ವಲಸೆ ಬಂದ ಯಹೂದಿಗಳು ಕೂಡ ತಮ್ಮ ಲಿಪಿಯನ್ನು ಕಳೆದು ಕೊಂಡಿದ್ದರು. ೨೦ ನೆಯ ಶತಮಾನದಲ್ಲಿ ಭಾಷಾಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು ಈ ಎರಡು ಭಾಷೆಗಳಿಗೆ ಲಿಪಿಗಳನ್ನು ಒದಗಿಸಿದ್ದಾರೆ.

ಇದೇ ರೀತಿ ಪ್ರಾಚೀನ ವಸ್ತುಶಾಸ್ತ್ರಜ್ಞರು ಯಾವೊಂದು ಸಮಾಜಕ್ಕೇ ಆದರೂ ಪ್ರಾಚೀನ ಚರಿತ್ರೆಯನ್ನು ಒಗಗಿಸಬಲ್ಲನು. ಈ ಒಂದು ಪ್ರಾಚೀನ ಸಂಸ್ಕೃತಿಯ ಅರಿವಿಲ್ಲದೆ ಸಮಾಜಗಳ ಚರಿತ್ರೆಯನ್ನು ತಪ್ಪಾಗಿ ಅಥವಾ ಅತಿರೇಕವಾಗಿ ವರ್ಣಿಸಿ ಬರೆಯ ಲಾಗಿದ್ದಿತು. ಆದರೆ ಇಂದು ಪ್ರಾಚೀನ ವಸ್ತುಗಳನ್ನು ಮತ್ತು ಅವುಗಳ ಜೊತೆಗಿದ್ದ ಸಾಮಗ್ರಿಗಳನ್ನು ತುಲನಾತ್ಮಕ ದೃಷ್ಟಿ ಯಿಂದ ಅಭ್ಯಾಸ ಮಾಡಿ ಮಾನವಶಾಸ್ತ್ರಜ್ಞನು ಪ್ರಾಚೀನ ವಸ್ತುಶಾಸ್ತ್ರಜ್ಞನಿಗೆ ಹೆಚ್ಚಿನ ವಿಷಯಗಳನ್ನು ನೀಡಬಲ್ಲನು. ಉದಾಹರಣೆಗೆ, ಅಮೇರಿಕನ್ ಇಂಡಿಯನ್ನರ ಮತ್ತು ಫಿಲಿಪೀನ್ಸ್ ಜನರ ಪ್ರಾಚೀನ ಚರಿತ್ರೆಗಳು ತಿಳಿದಿಲ್ಲ. ತೀರಾ ಇತ್ತೀಚಿನ ವರೆಗೆ ತಿಳಿದಿದ್ದಂತೆ ಫಿಲಿಪೀನ್ಸ್ ದೇಶವು ಕೇವಲ ಪತ್ತರಿಂದ ಹದಿನೈದು ಸಾವಿರ ವರ್ಷಗಳ ಚರಿತ್ರೆಯನ್ನು ಮಾತ ಉಳ್ಳದ್ದೆಂದೂ, ಸದ್ಯ ಅಲ್ಲಿ ವಾಸವಾಗಿರುವ ಜನರು ಇಲ್ಲಿಯ ಮೂಲನಿವಾಸಿಗಳಲ್ಲವೆಂದೂ, ಇಲ್ಲಿಗೆ ಅವರು ಚೀನಾ ಉಪಖಂಡ ದಿಂದ ಅಲೆಅಲೆಯಾಗಿ ವಲಸೆ ಬಂದವರೆಂದೂ ನಂಬಲಾಗಿದ್ದಿತು. ಇದರಂತೆ ಫಿಲಿಪೀನ್ಸ್‌ನ ಜನರ ಸಮಾಜ ಮತ್ತು ಸಂಸ್ಕೃತಿಗಳ

ಚರಿತ್ರೆಯನ್ನು ವಿವರಿಸಲಾಗಿದ್ದಿತು; ಇವರ ಸಂಸ್ಕೃತಿಯ ವಿವಿಧತೆಯು ಈ ಅಲೆ ಅಲೆಯಾಗಿ ವಲಸೆ ಬಂದ ಜನರು ಬರುವಾಗ ತಂದ ತಮ್ಮ ಸಂಸ್ಕೃತಿಯ ಅವಶೇಷಗಳೆಂದು ನಂಬಲಾಗಿದ್ದಿತು. ಆದರೆ ೧೯೬೫ ರಲ್ಲಿ ಫಿಲಿಪೀನ್ಸ್ ದೇಶದ ದ್ವೀಪಸ್ತೋಮಗಲ್ಲೊಂದಾದ ಪಲಾವಾನ್ (pala wan) ದ್ವೀಪದ "ತಬೋನ್" (tabon) ಗುಹೆಗಳಲ್ಲಿ ಮೂಲ ಮಾನವರ ನೆಲೆಗಳಿಗಾಗಿ ಹುಡುಕಿದಾಗ ಸಿಕ್ಕ ಪ್ರಾಚೀನವಸ್ತುಗಳು ೫೦ ಸಾವಿರ ವರ್ಷಕ್ಕೂ ಹಳೆಯವೆಂದು ತಿಳಿದು ಬಂದಿತು. ಈ ಒಂದು ಸಂತೋಷದ ವಿಷಯವು ತಿಳಿದುಬಂದಿತು. ಈ ಒಂದು ಸಂತೋಷದ ವಿಷಯವು ಫಿಲಿಪೀನ್ಸ್ ಜನರ ಮತ್ತು ಅವರ ಸಮಾಜದ, ಸಂಸ್ಕೃತಿಯ ಚರಿತ್ರೆಯನ್ನು ೫೦ ಸಾವಿರ ವರ್ಷಗಳ ಹಿಂದಕ್ಕೆ ತೆಗೆದುಕೊಂಡು ಹೋಗಿದೆ. ಹೀಗೆ ಮಾನವಶಾಸ್ತ್ರದ ಉಪಯೋಗವನ್ನು ಸಮಾಜಗಳ ಮತ್ತು ಸಂಸ್ಕೃತಿಗಳ ಚರಿತ್ರೆಯನ್ನು ಸರಿಪಡಿಸಲೂ ಉಪಯೋಗಿಸಬಹುದು.

## ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು

---

೧ ನಮ್ಮ ಶಿಕ್ಷಣ ನಮ್ಮ ಸಂಸ್ಕೃತಿ
—ವ್ಹಿ. ಜಿ. ಮಾರೀಹಾಳ

೨ ಸಮೂಹ ಮಾಧ್ಯಮಗಳು ಮತ್ತು ರಾಷ್ಟ್ರೀಯ ಅಭಿವೃದ್ಧಿ
—ಎ. ಎಸ್. ಬಾಲಸುಬ್ರಮಣ್ಯ

೩ ಗಜೇಶ ಮಸಣಯ್ಯ
—ಎಸ್. ಎಸ್. ಭೂಸರಡ್ಡಿ

೪ ಬದಲಾಗುತ್ತಿರುವ ಭಾರತೀಯ ಗ್ರಾಮ
—ಎಚ್. ವ್ಹಿ. ನಾಗೇಶ

೫ ವೇದಕಾಲದ ವಿವಾಹಗಳು
—ವಿದ್ವಾನ್ ಸಾಂಬದೀಕ್ಷಿತ

೬ ಎಲ್ಲಮ್ಮನ ಜೋಗತಿಯರು ಹಾಗೂ ದೇವದಾಸಿ ಪದ್ಧತಿ
—ಎನ್. ಕೆ. ಕಡೆತೋಟದ

೭ ಗ್ರಾಮಾಂತರ ಪ್ರದೇಶದ ಮಾರುಕಟ್ಟೆಯ ಮಹತ್ವ
—ಎ. ಆರ್. ರೊಟ್ಟಿ

೮ ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ
—ಬಸವರಾಜ ಸಬರದ

೯ ಸರ್ವೋದಯ ಹಾಗೂ ಜನಕಲ್ಯಾಣ
—ಎಂ. ಎಸ್. ಬಡಕಲಿ

೧೦ ನೇಕಾರಿಕೆ ಮತ್ತು ಸರಕಾರ
—ಈರಣ್ಣ ಹಟ್ಟಿ

---

**ಪ್ರಸಾರಾಂಗ**
**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**